# ಕನ್ನಡನುಡಿ

ಸಂಪುಟ ೧೫ ಜೂನ್ ಸಂಚಿಕೆ ೬

ವಾರ್ಷಿಕ ಚಂದಾ : ಅಂಚೆ ವೆಚ್ಚ ಸೇರಿ ರೂ. ೬



ಸಂಪಾದಕರು :

ಎಂ. ಆರ್. ಶ್ರೀನಿವಾಸಮೂರ್ತಿಗಳು

ಕನ್ನಡ ಸಾಹಿತ್ಯ ಪರಿಷತ್ತು

ಬೆಂಗಳೂರು

೧೯೫೨

## ವಿಷಯಸೂಚಿಕೆ



ಮೈಸೂರು ವಿದ್ಯಾಖಾತೆಯವರಿಂದ ಟಿ. ಬಿ. ಸಿ. 15/50-51 (ತಾ|| 24-11-50) ನಿರೂಪದ ಪ್ರಕಾರ 'ಕನ್ನಡ ನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈಯಿನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ. ರೂರಲ್ ಡೆವಲಪ್‌ಮೆಂಟ್ ಕಮಿಷನರ್ ಅವರ ನಂ.ಆರ್.ಡಿ.ಆರ್. 7, ಸಿ.2915/50-51 ನೆಯ ಪ್ರಕಾರ "ಕನ್ನಡ ನುಡಿ" ಸಂಸ್ಥಾನದ ಎಲ್ಲಾ ಗ್ರಾಮಪಂಚಾಯಿತಿಗಳಿಗೂ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ.



ಶ್ರೀ ವೇಣುಗೋಪಾಲಸ್ವಾಮಿ

ವೇಣುಗೋಪಾಲ ದೇವಾಲಯ, ಕುಪ್ಪಗಡ್ಡೆ

ಪ್ರಾಚ್ಯ ಸಂಶೋಧನ ಶಾಖೆಯವರ ಕೃಪೆಯಿಂದ

# ಕನ್ನಡನುಡಿ



ಸಂಪುಟ ೧೫ | ಜೂನ್ ೧೯೫೨ | ಸಂಚಿಕೆ ೬




## ಪ್ರಾರ್ಥನೆ

ರಾಗ : ಕಾಂಭೋದಿ, ತಾಳ : ಝಂಪೆ

ಏನುಕಾರಣ ಮತಿಯಿಲ್ಲ ಮನವೆ ॥ ಪ ॥
ಹೀನಾಯವಾಡದಿರು ಪರರ ಗುಣಗಳ ಎಣಿಸಿ ॥ ಅ ॥ ಪ ॥

ಅವನ ಗೊಡವೆಯೇಕೆ ಅವನಾರು ನೀನಾರು
ಅವನ ಪಾಪಕ್ಕೆ ನೀ ಭಾಗಾದಿಯೆ
ಅವನುತ್ತಮನಾದೊಡವನೆ ಬದುಕಿದ ಕಾಣೊ
ಅವ ಪುಣ್ಯಮಾಡಿದರೆ ಅವನ ಕುಲ ಉದ್ಧಾರ

ನಿನಗೆ ಕೊಡುವುದರೊಳಗೆ ಬೇಡಬಂದವನಲ್ಲ
ನಿನಗೆ ಅವನಿಗೆ ಏನು ಸಂಬಂಧವೊ
ಮನೆ ಒಡವೆ ವಸ್ತುಗಳ ಹಂಚಿಕೊಂಬುವದಲ್ಲ
ಕ್ಷಣಕ್ಷಣಕ್ಕೆ ಕ್ಲೇಶವನು ಮಾಡಿಕೊಂಬುದು ಸಲ್ಲ

ನಿನ್ನ ಗತಿ ಮಾರ್ಗಕ್ಕೆ ಅವನಡ್ಡ ಬಾಹನೆ
ನಿನ್ನಿಂದ ಪರಲೋಕ ಅವನಿಗುಂಟೆ ?
ನಿನ್ನೊಳಗೆ ನೀ, ತಿಳಿದು ವಿಜಯವಿಠ್ಠಲನ್ನ
ಸನ್ನುತಿಸಿ ಭವರೋಗ ಬನ್ನವನು ಕಳೆಯೊ

—ಶ್ರೀ ವಿಜಯದಾಸರು

# ಸುಭಾಷಿತಗಳು

ದೊಡ್ಡವರ ಸ್ಥಾನದಲ್ಲಿದ್ದ ಮಾತ್ರಕ್ಕೆ ಅವರ ದೊಡ್ಡತನವನ್ನು ಪಡೆಯಲು ಹೇಗೆ ಸಾಧ್ಯ ?

**ಅಂಡಜಾಃ ಪುಂಡರೀಕೇಷು ಸಮುದ್ರೇಷು ಜನಾರ್ದನಾಃ ।**
**ನೀಲಕಂಠಾಶ್ಚ ಶೈಲೇಷು ನಿವಸಂತು ನ ತೇನ ತೇ ॥**

ಅಂಡಜ (ಹಂಸ) ಗಳು ಪುಂಡರೀಕ (ಕಮಲ)ಗಳಲ್ಲಿ ವಾಸವಾಗಿರಲಿ; ಜನಾರ್ದನ (ಜಲಜಂತು)ಗಳು ಕಡಲಿನಲ್ಲಿ ನೆಲಸಿರಲಿ, ನೀಲಕಂಠ (ನವಿಲು) ಗಳು ಬೆಟ್ಟಗಳಲ್ಲಿರಲಿ. ಅಷ್ಟುಮಾತ್ರದಿಂದ ಅವು ಅಂಡಜ (ಬ್ರಹ್ಮ), ಜನಾರ್ದನ (ವಿಷ್ಣು), ಮತ್ತು ನೀಲಕಂಠ (ಮಹೇಶ್ವರ) ರಾಗುವುದಿಲ್ಲ.

* * *

ಗರ್ವದಿಂದ ಪಂಡಿತರ ವೇಷವನ್ನು ಹಾಕಿಕೊಂಡರೂ ಅವರ ಪಾಂಡಿತ್ಯಾದಿ ಗುಣಗಳನ್ನು ಹೊಂದಲಾಗುವದೇ ?

**ಕಾಮಂ ಲಿಖತು ಸಂಸ್ಥಾನಂ ಕಶ್ಚಿದ್ರೂಪಂ ಚ ಭಾಸ್ವತಃ ।**
**ಅಭಿತ್ತಿವಿಹಿತಾಲಂಬನಮಾಲೋಕಂ ವಿಲಿಖೇತ್ಕಥಂ ॥**

ಯಾವನಾದರೊಬ್ಬ ಶಿಲ್ಪಿ ಸೂರ್ಯನ ಬಿಂಬವನ್ನೊ ಅವನ (ಅರುಣ) ರೂಪವನ್ನೋ ತನಗೆ ಇಷ್ಟಬರೆದಂತೆ ಬಂದಾನು. ಆದರೆ ಅವಲಂಬನವೇ ಇಲ್ಲದೆ ಅವನು ಬರೆಯುವುದೇನು ?

* * *

ಎಷ್ಟೆ ದೊಡ್ಡವರಾದರೂ ಇನ್ನೂ ದೊಡ್ಡವರಿರುವರೆಂದು ಗರ್ವಪಡದಿರಬೇಕು.

**ಅಸ್ತು ತಾವದಗಸ್ತ್ಯೇನ ಜಹ್ನೋರ್ಮುಹಿಮುನಿಹ್ನವಃ ।**
**ಕಾ ಕಥಾ ತಸ್ಯ ಬಾಲಸ್ಯ ವಿಶ್ವಗ್ರಾಸೇऽಪ್ಯತೃಪ್ಯತಃ ॥**

ಜಹ್ನುಮುನಿ ಗಂಗೆಯನ್ನು ಪಾನಮಾಡಿದನು; ಅದೇ ಒಂದು ಆಶ್ಚರ್ಯವಾಯಿತು. ಅಗಸ್ತ್ಯಮುನಿ ಕಡಲುಗಳನ್ನೆಲ್ಲ ಏಕಾಪೋಶನ ಮಾಡಿದನು. ಅದು ಅದಕ್ಕಿಂತಲೂ ದೊಡ್ಡ ಆಶ್ಚರ್ಯವೆನಿಸಿತು. ಆದರೆ (ಆಲದೆಲೆಯಮೇಲೆ ಪವಳಿಸಿದ) ಆ ಬಾಲಕ ವಿಶ್ವವನ್ನೇ ನುಂಗಿಯೂ ತೃಪ್ತನಾಗದಿರುವನಲ್ಲ! ಅವನ ವಿಷಯದಲ್ಲಿ ಏನು ಹೇಳಬೇಕು ?

'ಸುಭಾಷಿತ ನೀವೀ'

—ಶ್ರೀ ವೇದಾಂತ ದೇಶಿಕರು

# ಶಿಕ್ಷಣ ಮತ್ತು ಶೀಲ

[ ಸರ್ ರಿಚಿರ್ಡ್ ಲಿವಿಂಗ್ ಸ್ಟೋನ್ ಅವರ Education and the Training of Character ಎಂಬ ಭಾಷಣದ ಆಧಾರದಿಂದ ]

ಶ್ರೀ ವಿ. ಅಶ್ವತ್ಥನಾರಾಯಣ

ಒಂದು ದೇಶದ ಸರ್ಕಾರ ಅಲ್ಲಿಯ ಜನಗಳಿಗೆ ತಕ್ಕಂತೆ ಇರುವುದು. ರಾಷ್ಟ್ರಗಳು ಅವುಗಳ ನಾಗರಿಕರಿಂದಾಗುವುದರಿಂದ, ಅವುಗಳ ಸ್ಥಿತಿ ನಾಗರಿಕರ ಗುಣಗಳಿಗೆ ಅನುಸಾರವಾಗಿರುವುದು ಎಂಬ ನಿಜವಾದ ಮಾತನ್ನು ಪ್ಲೇಟೋ ಹೇಳಿರುವನು.

ಸಾವಿರಾರು ವರುಷಗಳಿಂದ, ಯುದ್ಧವನ್ನು ನಿರ್ಮೂಲ ಮಾಡಿ ಶಾಂತಿಯನ್ನು ಸ್ಥಾಪಿಸಲು ಮಾನವನು ಯತ್ನಿಸುತ್ತಿರುವುದೂ ನಿಜ. ಆ ಯತ್ನದಲ್ಲಿ ಸೋಲುತ್ತಿರುವುದೂ ನಿಜ. ವಿಶ್ವಸಂಸ್ಥೆ ಸಾಂಪ್ರತ ಕಾಲದ ಅಂತಹ ಮತ್ತೊಂದು ಪ್ರಯತ್ನ. ಈ ಯತ್ನಗಳೆಲ್ಲ ವಿಫಲವಾಗುತ್ತಿರುವುದೇಕೆ- ಎಂದು ಯೋಚಿಸಿದಾಗ ಒಂದು ಪ್ರಬಲ ಕಾರಣ ನಮಗೆ ಸಿಗುವುದು: ಎಲ್ಲ ಸಂಸ್ಥೆಗಳ ಯಶಸ್ವೀ ಕಾರ್ಯವು ಅವುಗಳ ಕಾರ್ಯಕರ್ತರನ್ನು— ಎಂದರೆ ಅವರ ಶೀಲವನ್ನು ಅವಲಂಬಿಸಿದೆ. ಒಂದು ಯಂತ್ರದ ದಕ್ಷತೆಯು, ಅದು ಎಂತಹ ವಸ್ತುಗಳಿಂದಾಗಿದೆ, ಅದರ ರಚನೆ ಎಂತಹ ತಂತ್ರದ ಮೇಲೆ ನಿಂತಿದೆ ಎಂಬುದರ ಜತೆಗೆ ಆ ಯಂತ್ರವನ್ನು ನಡೆಸುವವನ ಮೇಲೂ ನಿಂತಿಲ್ಲವೆ? ಬರಿಯ ರಾಜಕೀಯ ಯಂತ್ರಗಳ ಸ್ಥಾಪನೆಯಿಂದ ನಮ್ಮ ಗುರಿಯನ್ನು ಸಾಧಿಸಲಾರೆವು. ರಾಜಕೀಯ ಸಮಸ್ಯೆ ಮಾನವನ ಗುಣದ ಸಮಸ್ಯೆಯೇ ಆಗಿದೆ. ದೇಶದ ಆಗುಹೋಗುಗಳು ಭೂಗುಣ, ವಾಯುಗುಣ, ಆರ್ಥಿಕ ವ್ಯವಸ್ಥೆ, ವಿಜ್ಞಾನದ ಪ್ರಗತಿ— ಇವುಗಳನ್ನೆಲ್ಲ ಅವಲಂಬಿಸಿವೆ ಎಂಬುದು ನಿಜ. ಆದರೂ ಅವು ಬಹುಮಟ್ಟಿಗೆ ನಮ್ಮ ಸ್ವಭಾವವನ್ನು ಅವಲಂಬಿಸಿವೆ. ಕೇವಲ ನೆಪೋಲಿಯನ್, ಲಿಂಕನ್ ಗಾಂಧಿ ಯಂತಹವರ ಪ್ರತಿಭೆಯೇ ಅಲ್ಲದೆ ಸಾಧಾರಣ ಮಾನವ ಸ್ವಭಾವವೂ, ವಿವೇಕ, ಜಾಣ್ಮೆ, ತೀರ್ಮಾನಕ್ಕೆ ಬರುವ ಶಕ್ತಿ, ದೂರದೃಷ್ಟಿ ಮತ್ತು ಇವುಗಳ ವಿರುದ್ಧ ಗುಣಗಳು ; ಇವಕ್ಕೆ ಮಿಗಿಲಾಗಿ ಅಸಕ್ತತೆ, ಧೈರ್ಯ, ಪ್ರಾಮಾಣಿಕತೆ, ತಾಳ್ಮೆ, ಆತ್ಮಸಂಯಮ, ನಿಶ್ಚಿತ ಗುರಿಯ ಸಾಧನೆಗಾಗಿ ಸತತ ಪ್ರಯತ್ನ— ಇವುಗಳ ವಿರುದ್ಧಗಳಾದ ದುರಾಸೆ, ಅಹಂಕಾರ, ದ್ವೇಷ, ಹೆದರಿಕೆ, ಕೇವಲ ಭೋಗಲಾಲಸೆ ಇವೆಲ್ಲ— ಇತಿಹಾಸದ ಘಟನೆಗಳ ನಿರ್ಣಾಯಕಗಳೆಂಬುದನ್ನು ಅರಿಯಬೇಕು. ಇವೂ ಜಗತ್ತಿನ ಸಾಧನೆಗಳನ್ನೂ ಅಪಜಯಗಳನ್ನೂ ನಿರ್ಣಯಿಸುವುವು. ಮಾನವನೇ ಅಂದಿನ ಮತ್ತು ಇಂದಿನ ಸಮಸ್ಯೆ. ಮಾನವ ವರ್ಗ ತನ್ನ ಉಡುಪನ್ನು ಬದಲಾಯಿಸಿರಬಹುದು ; ಆದರೆ ಸ್ವಭಾವವನ್ನಲ್ಲ. ನಮ್ಮ ತಿಳಿವಳಿಕೆ ಬೇಕಾದಷ್ಟು ಬೆಳೆದಿದೆ. ಅದಕ್ಕೆ ತಕ್ಕಂತೆ ಶೀಲ ಬೆಳೆದಿಲ್ಲ.

"ಶಿಕ್ಷಣವೆಂದರೆ ತಿಳಿವಳಿಕೆಯನ್ನು ಕೊಡುವುದಲ್ಲ ; ಜನರು ಯಾವ ರೀತಿ ನಡೆಯುತ್ತಿಲ್ಲವೋ ಆ ರೀತಿ ನಡೆಯುವಂತೆ ಮಾಡುವುದೇ" ಎಂಬ ರಸ್ಕಿನನ ಮಾತುಗಳನ್ನು ನಾವು ಗಮನಿಸಬೇಕು. ನಾಗರಿಕತೆಯ ಭವಿಷ್ಯತ್ತು ಮಾನವರ ಶೀಲದ ಮೇಲೆ ಬಹುಮಟ್ಟಿಗೆ ನಿಂತಿದ್ದರೂ, ನಾವು ಕೇವಲ ರಾಜಕೀಯ ಯಂತ್ರವನ್ನು ಉತ್ತಮಪಡಿಸಲು ಹವಣಿಸುತ್ತಿರುವೆವು.

ತಾನು ಸೃಷ್ಟಿಸಿದ ವಸ್ತುಗಳಿಗೇ ಮಾನವನು ಗುಲಾಮನಾಗುವ ಸಂಭವವುಂಟು ಆಧುನಿಕ ಮಾನವನ ಮುಖ್ಯ ಸೃಷ್ಟಿ ವಿಜ್ಞಾನ ಮತ್ತು ಆರ್ಥಿಕ, ರಾಜಕೀಯ, ಸಾಮಾಜಿಕ ವ್ಯವಸ್ಥೆಗಳು. ಇವೆಲ್ಲವನ್ನೂ ಸರಿಯಾಗಿ ನಡೆಸಲು ತಿಳಿವಳಿಕೆ ಮತ್ತು ಸಾಮರ್ಥ್ಯ ಬೇಕು. ಇಲ್ಲದಿದ್ದಲ್ಲಿ ಅವು ಬೇಗ ನಮ್ಮನ್ನು ದಾಸ್ಯದಲ್ಲಿಡುವುವು. ವಿಜ್ಞಾನ ಮುಂದುವರಿದಂತೆಲ್ಲ, ಸಮಾಜ ಶಾಸ್ತ್ರ ನಮ್ಮ ಕರಗತವಾದಂತೆಲ್ಲ ಈ ದಾಸ್ಯ ಮಾಯವಾಗುವುದೆಂಬ ಕಲವರ ಅಭಿಪ್ರಾಯಕ್ಕೆ ತಕ್ಕ ಆಧಾರವಿಲ್ಲ. ನಮ್ಮ ಜ್ಞಾನ ಬೆಳೆದಿದ್ದರೂ, ನೈತಿಕಮಟ್ಟ ಏರಿಲ್ಲ ; ನಮ್ಮ ದುರಾಸೆ, ಕ್ರೌರ್ಯ, ವಂಚನೆಗಳು ಕಡಮೆಯಾಗಿಲ್ಲ. ಪಠ್ಯ ವಿಷಯ ಬದಲಾಗಬೇಕು, ಬೋಧನೆಯ ಕ್ರಮ ಉತ್ತಮಗೊಳ್ಳಬೇಕು ; ವೃತ್ತಿಶಿಕ್ಷಣಕ್ಕೆ ಗಮನ ಕೊಡಬೇಕು. ಇವೆಲ್ಲ ಇಂದಿನ ಸ್ಥಿತಿಗೆ ವ್ಯಕ್ತಿ ಹೊಂದಿಕೊಳ್ಳಲು ಸಹಾಯಕವಾಗಬಹುದೇ ಹೊರತು, ಯಾವು

ದಕ್ಕೋಸ್ಕರ ಈ ಎಲ್ಲ ತೊಡಕಾದ ವ್ಯವಸ್ಥೆಗಳಿವೆಯೋ ಆ ಚೇತನವನ್ನು ಅಲಕ್ಷಿಸಿದಂತಾಗುವುದು. ಸಂಪತ್ತು ಮತ್ತು ಅನುಕೂಲ ಹೆಚ್ಚಿದಂತೆ ನಮ್ಮ ಆತ್ಮ ಬಲಗೊಳ್ಳಬೇಕು; ಆತ್ಮಸಂಯಮ ಬೆಳೆಯಬೇಕು; ವಸ್ತುಗಳ ಮೇಲೆ ನಮ್ಮ ಪೂರ್ಣ ಅಧಿಕಾರ ಉಂಟಾಗಬೇಕು; "ನಾನು ನಿನ್ನ ದಾಸನಲ್ಲ, ನಿನ್ನ ಒಡೆಯ" ಎನ್ನುವಂತೆ ಆಗಬೇಕು. ವಿಜ್ಞಾನದ ದುರುಪಯೋಗ ತಪ್ಪಬೇಕು.

ಹಿಂದೆಂದೂ ಆಗದಂತಹ ಪಾಪಕೃತ್ಯಗಳು ನಡೆಯುತ್ತಿರುವುದಕ್ಕೆ ಮುಖ್ಯ ಕಾರಣ ಇದು: ಇಂದು ನಮ್ಮ ಮನಸ್ಸು ಒಂದು ರೀತಿಯಲ್ಲಿ ಬರಿದಾಗಿದೆ, ಜೀವನಕ್ಕೆ ಅರ್ಥ ಕೊಡುವ ಬಲವಾದ ತತ್ತ್ವವಿಲ್ಲ. ಪ್ಯಾಸ್ಕಲನ ಈ ಮಾತುಗಳನ್ನು ಕೇಳಿ: 'ಪ್ರೇಮ ಮತ್ತು ನಂಬಿಕೆ ಮಾನವನ ಸ್ವಭಾವ; ಈ ನಂಬಿಕೆ ಮತ್ತು ಪ್ರೇಮಕ್ಕೆ ಯೋಗ್ಯವಾದ ವಸ್ತುಗಳು ದೊರೆಯದಿದ್ದಲ್ಲಿ ಅಯೋಗ್ಯವಾದವುಗಳನ್ನು ಆಶ್ರಯಿಸುವನು.'

ಶಿಕ್ಷಣವು ಈ ಸಮಸ್ಯೆಗಳನ್ನು ಅಷ್ಟಾಗಿ ಗಮನಿಸಿಲ್ಲ. ನಮ್ಮ ಆರ್ಥೋತ್ಸಾಹ ಎಂತಹ ಶಾಲೆಗಳು ಬೇಕು, ಪಠ್ಯ ವಿಷಯಗಳೇನಿರಬೇಕು — ಮುಂತಾದ ಶೈಕ್ಷಣಿಕ ಯಂತ್ರಕ್ಕೆ ಗಮನ ಕೊಟ್ಟಿದೆಯೇ ಹೊರತು, ಅತಿ ಮುಖ್ಯವಾದ ಗುಣದ ಉತ್ಕರ್ಷಕ್ಕೆ ಗಮನವಿತ್ತಿಲ್ಲ. ಯಾವ ಯಾವ ಗುಣಗಳು ಬೇಕು ಎಂಬುದನ್ನು ಮೊದಲು ನಿರ್ಧರಿಸಬೇಕು. ಮಾರ್ದವ ಮತ್ತು ಧೈರ್ಯ, ವಿವೇಕ, ಜಿಜ್ಞಾಸೆ ಇತರರ ವ್ಯಕ್ತಿತ್ವಕ್ಕೆ ಗೌರವ, ಸಹನೆ ಮತ್ತು ದಾರ್ಢ್ಯ, ಆತ್ಮವಿಶ್ವಾಸ ಮತ್ತು ಅದಕ್ಕೆ ತಕ್ಕ ಚಿಕೀರ್ಷೆ ಮತ್ತು ಸ್ವಪ್ರತ್ಯಯ ವೃತ್ತಿ — ಇವೆಲ್ಲ ಬೇಕಲ್ಲವೆ? ವ್ಯಕ್ತಿಯನ್ನು ಮಾಡುವುದು ಕಠಿನ ಕೆಲಸ. ಈ ಪ್ರಪಂಚವು a vale of soul-making ಎಂದಲ್ಲವೇ ಕವಿಪುಂಗವನೊಬ್ಬನು ಹೇಳಿರುವುದು?

ಪ್ರಾರಂಭಿಸುವುದು ಹೇಗೆ? ಮೊದಲು ಯಾವ ಗುಣಗಳು ಬೇಕು, ಅವುಗಳನ್ನು ಬೆಳೆಸಲು ಮಾರ್ಗವೇನು ಎಂಬುದನ್ನು ನಿರ್ಧರಿಸಬೇಕು. ನಮ್ಮ ಮತ್ತು ಇತರ ಜನಾಂಗಗಳ ಗುಣಾವಗುಣಗಳೇನು? ಅವುಗಳ ಮೂಲವೇನು ಎಂಬುದನ್ನು ಕಂಡುಹಿಡಿಯಬೇಕು. ನಮ್ಮ ದೌರ್ಬಲ್ಯ ಮತ್ತು ಪ್ರಲೋಭಗಳನ್ನು ಗುರುತು ಹಚ್ಚಿ ಅವನ್ನೆದುರಿಸಲು ಕ್ರಮವನ್ನು ಹುಡುಕಬೇಕು. ಈ ವಿಷಯದಲ್ಲಿ ಮನಶ್ಶಾಸ್ತ್ರಜ್ಞರ ಸಹಾಯ ಆವಶ್ಯಕ ಮತ್ತು ಅಮೂಲ್ಯ.

ಗುಣದ ಶಿಕ್ಷಣದಲ್ಲಿ ಎರಡು ಮುಖ್ಯ ಅಂಶಗಳಿವೆ. ಇತರರೊಡನೆ ನಾವು ಯಾವ ರೀತಿ ನಡೆದುಕೊಳ್ಳಬೇಕು ಎಂಬುದೇ ಮೊದಲನೆಯದು. ನಮಗೆ ನಾಲ್ಕು ವಿಧ ಸದಸ್ಯತ್ವಗಳಿವೆ. — ಒಂದು ಕುಟುಂಬದ, ಊರಿನ, ರಾಷ್ಟ್ರದ, ಕೊನೆಗೆ ಇಡೀ ಮಾನವಜನಾಂಗದ ಸದ್ವ್ಯಕ್ತಿಯಾಗಿ ಬಾಳಬೇಕಾಗಿರುವುದು. ಈ ನಾಲ್ಕರಲ್ಲಿ ಯಾವುದೊಂದರಲ್ಲೂ ಅಪಯಶಸ್ಸುಗಳಿಸಿದರೆ ಇಡೀ ಪ್ರಪಂಚದ ತೊಂದರೆಗೆ ದಾರಿಮಾಡಿದಂತಾಗುವುದು.

ಇತರರೊಡನೆ ಬಾಳುವುದನ್ನು ಕಲಿಯುವುದು ಅತ್ಯಾವಶ್ಯಕ. ಅವರ ಹಕ್ಕು ಮತ್ತು ಅಭಿಪ್ರಾಯಗಳಿಗೆ ಮನ್ನಣೆಯನ್ನು ಕೊಡಬೇಕು. ಗುಂಪಿನ ಏಳಿಗೆಗಾಗಿ ಸ್ವಲ್ಪಮಟ್ಟಿಗಾದರೂ ದುಡಿಯಬೇಕು. ಬಹುಮತಕ್ಕೆ ಮನ್ನಣೆಯನ್ನು ಕೊಡಬೇಕು. ಇವು ಇರದಿದ್ದಲ್ಲಿ ಸಮಾಜವು ಏಳಿಗೆಗೆ ಬಾರದೆ, ಅದರೊಂದಿಗೆ ನಾವೂ ಹಾಳಾಗಬೇಕಾಗುವುದು.

ಪ್ರಜಾಪ್ರಭುತ್ವ ಯಶಸ್ವಿಯಾಗಲು ಒಳ್ಳೆಯ ಪೌರತ್ವ ಬೇಕೇಬೇಕು. ಸ್ವಾತಂತ್ರ್ಯವು ಪ್ರಜಾಪ್ರಭುತ್ವದ ಜೀವಾಳ. ಪರಹಿತಸಾಧನೆಯಲ್ಲಿ ನಾವಾಗಿ ತೋರುವ ತ್ಯಾಗ ಮತ್ತು ಸೇವೆಯೇ ಈ ಸ್ವಾತಂತ್ರ್ಯದ ಸಾರ. ಇದು ನಮ್ಮ ಹುಟ್ಟುಗುಣಕ್ಕೆ ವಿರುದ್ಧವಾದುದು ನಿಜ. ಆದರೂ ಈ ಗುಣವನ್ನು ನಾವು ಸಂಪಾದಿಸದಿದ್ದಲ್ಲಿ ಪ್ರಗತಿ ಕೇವಲ ಭ್ರಮೆಯಾಗುವುದು.

ಪ್ರಜಾಪ್ರಭುತ್ವ ಬೇಕೆನ್ನುವ ಪ್ರತಿಯೊಂದು ಜನಾಂಗವೂ ಶಿಸ್ತು, ಸಂಯಮ, ಸಮಷ್ಟಿಯ ಹಿತದ ದೃಷ್ಟಿ — ಇವುಗಳನ್ನು ಕಲಿಯಲೇಬೇಕು. ಕಾಳಸಂತೆ, ಮೋಸ, ಕರ್ತವ್ಯದಲ್ಲಿ ಅಶ್ರದ್ಧೆ ಇವೆಲ್ಲ ನಮ್ಮಲ್ಲಿರುವಾಗ ಪ್ರಗತಿಯಲ್ಲಿ ನಂಬಿಕೆ ಬರುವುದೆ? ನಮ್ಮ ಮುಖ್ಯ ಸಮಸ್ಯೆ ಇದು: ನಮ್ಮ ಒಳ್ಳೆಯ ಗುಣಗಳನ್ನು ರೂಢಗೊಳಿಸಿ, ದೌರ್ಬಲ್ಯಗಳನ್ನು ಹೋಗಲಾಡಿಸಿ ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವಗಳನ್ನು ರಕ್ಷಿಸುವುದು ಹೇಗೆ? ಇದನ್ನು ಸಾಧಿಸುವುದರಲ್ಲಿ ಇಂದಿನ ಶಿಕ್ಷಣ ಎಷ್ಟರ ಮಟ್ಟಿಗೆ ಸಹಕಾರಿಯಾಗಿದೆ?

ಸಮಷ್ಟಿ ಜೀವನಕ್ಕೆ ಆವಶ್ಯಕವಾದ ಗುಣಗಳನ್ನು ಬೆಳೆಸಲು ಇರುವ ಮಾರ್ಗ ಒಂದೇ ಒಂದು: ಅಂತಹ ಗುಣಗಳ ಬೆಳವಣಿಗೆಗೆ ಸಹಕಾರಿಯಾದ ಜೀವನವನ್ನು ನಡೆಸುವುದೇ. ಇಲ್ಲಿ ಕೆಲವು ಸೂಚನೆಗಳನ್ನು ಮಾತ್ರ ಕೊಡಬಹುದು. ಗುಂಪಿನಲ್ಲಿ ವಾಸಮಾಡಲು ಸಹಕಾರಿಯಾದ ಗುಣಗಳ ಬೆಳವಣಿಗೆಗೆ ಅವಕಾಶ ಕೊಡುವ—

ಶಿಶುವಿಹಾರಗಳು, ಶಾಲೆಯಲ್ಲಿ ಸಂಘಗಳ ಮತ್ತು ಸಾಮೂಹಿಕ ಚಟುವಟಿಕೆಗಳ ವ್ಯವಸ್ಥೆ, ಶಾಲೆಯ ಆಂತರಿಕ ಆಡಳಿತದಲ್ಲಿ ಪ್ರಜಾತಂತ್ರ ತತ್ತ್ವವನ್ನು ಅನುಸರಿಸುವುದು, ಸ್ಕೌಟು ಮತ್ತು ಗರ್ಲ್‌ಗೈಡುಗಳ ಏರ್ಪಾಡು.

ಇನ್ನು ಎರಡನೆಯ ಅಂಶ. ತುಂಬುಜೀವನಕ್ಕೆ ಆದರ್ಶವೊಂದು ಬೇಕು. ಆದಿರದಿದ್ದರೆ ಜೀವನದಲ್ಲಿ ಬಲವಾದ ಉದ್ದೇಶವಾಗಲಿ ಚಿಕೀರ್ಷೆಯಾಗಲಿ ಇರುವುದಿಲ್ಲ. ನಮಗಿಂತ ದೊಡ್ಡದೊಂದನ್ನು ಆರಾಧಿಸಲೇ ಬೇಕು.

ಮತ, ಸಮಾಜಸೇವೆ, ಕಲೆ, ಸಾಹಿತ್ಯ, ಕೀರ್ತಿ, ರಾಜಕೀಯ, ಸಂಪತ್ತು—ಇವನ್ನೆಲ್ಲ ಜನರು ಆದರ್ಶವನ್ನಾಗಿ ಮಾಡಿಕೊಳ್ಳುವುದುಂಟು. ಆಗ ತಮ್ಮ ವೇಳೆ ಮತ್ತು ಶಕ್ತಿಯನ್ನು ವಿನಿಯೋಗಿಸಲು ಒಂದು ಸ್ಪಷ್ಟ ಗುರಿ ಸಿಕ್ಕು ಜೀವನಕ್ಕೆ ಅರ್ಥ ಸಿಗುವುದು. ನಮಗೆ ಯಾವ ಆದರ್ಶಬೇಕು? ಆಟಗಾರರು ತಮ್ಮ ಆಟದಲ್ಲಿ ಅದ್ವಿತೀಯರಾಗಬೇಕೆಂದು ಬಯಸುವುದಿಲ್ಲವೇ? ನಮ್ಮ ವೃತ್ತಿಯಲ್ಲಿ ಉತ್ತಮರಾಗಬೇಕೆಂಬ ಆಸೆ ಇರುವುದಿಲ್ಲವೇ? ಎಲ್ಲದರಲ್ಲಿಯೂ ಉತ್ತಮವೇ ನಮಗೆ ಪ್ರಿಯವಲ್ಲವೇ? ಆದುದರಿಂದ ಉತ್ಕರ್ಷ ಅಥವಾ ಉತ್ತಮತ್ವವೇ ನಮ್ಮ ಆದರ್ಶವಾಗಬೇಕು.

ನಮ್ಮ ನಮ್ಮ ಉದ್ಯೋಗದಲ್ಲಿ ಉತ್ತಮಕ್ರಮ ಮತ್ತು ಆದರ್ಶಗಳ ಪರಿಚಯವಿರುವುದು ಆವಶ್ಯಕ. ನಾಗರಿಕತೆಗೆ ಬೇಕಾದ ಕಲೆ, ಸಾಹಿತ್ಯಗಳಲ್ಲಿ ಆಸಕ್ತಿ ಬೇಕು. ಇವುಗಳಲ್ಲೂ ಉತ್ತಮವಾದುದು ಯಾವುದು ಎಂದು ತಿಳಿಯುವ ಶಕ್ತಿ ನಮಗೆ ಬೇಕು.

ರಾಷ್ಟ್ರಜೀವನದಲ್ಲಿ ಉತ್ತಮವೆಂದರೇನೆಂಬುದರ ಅರಿವು ನಮಗೆ ಬೇಕು. ಎಷ್ಟರಮಟ್ಟಿಗೆ ನಮ್ಮ ರಾಷ್ಟ್ರವನ್ನು ಸುಖದ ಬೀಡನ್ನಾಗಿ ಮಾಡಬಹುದು ಎಂಬ ಅರಿವಿನ ಜತೆಗೆ ಒಂದು ಆದರ್ಶ ಸಿಗುವುದು. ಆದಿದ್ದರೆ ಮನೆಗಳೆಂಬ ಕೊಳಕು ಜೋಪಡಿಗಳೂ, ರೋಗ ರುಜಿನಗಳೂ ಜನಗಳ ಅಜ್ಞಾನವೂ, ಕೈಗಾರಿಕೆಯ ನಗರಗಳ ಕುರೂಪವೂ ಮಾಯವಾಗುವುದಕ್ಕೆ ಸಹಾಯವಾಗುವುದಿಲ್ಲವೇ? ಬರಿಯ ದೇಶಪ್ರೇಮಕ್ಕೆ ಅರ್ಥವಿಲ್ಲ. ಪ್ರೇಮಕ್ಕೆ ದೇಶವನ್ನು ಪಾತ್ರವನ್ನಾಗಿ ಮಾಡುವ ಯತ್ನವು ದೇಶಪ್ರೇಮಕ್ಕೆ ಅರ್ಥಕೊಡುವುದು.

ಇನ್ನು ಗುಣಶೀಲಗಳ ಆದರ್ಶ ಬೇಕು. ಇಲ್ಲಿ ಮತ, ಸಾಹಿತ್ಯ, ಇತಿಹಾಸ, ಕಲೆ–ಇವು ಸಹಾಯಕವಾಗುವುವು. 'ಉತ್ತಮ' ಗುಣಗಳ ಮಾದರಿಗಳನ್ನು ವಿದ್ಯಾರ್ಥಿಗಳ ಮುಂದಿಡದ ಶಿಕ್ಷಣ ತನ್ನ ಕರ್ತವ್ಯವನ್ನು ಮಾಡಿದಂತಾಗುವುದಿಲ್ಲ.

ಒಟ್ಟಿನಲ್ಲಿ, ಶಿಕ್ಷಣವು ಗುಣಗಳ ಬೆಳೆವಣಿಗೆಗೆ ತಕ್ಕ ಕ್ರಮಗಳನ್ನು ಕಂಡುಹಿಡಿಯಬೇಕು. ಸಮಾಜದಲ್ಲಿ ಬಾಳಲು ಬೇಕಾದ ಗುಣಗಳೇ ಸಾಲವು. ನಮ್ಮ ಸಂಸ್ಕೃತಿ ಜೇನು ಹುಳುವಿನ ಮುಂದುವರಿಯದ ಸಂಸ್ಕೃತಿ ಆಗಬಾರದು. ಯೋಗ್ಯ ಗುರಿ ಬೇಕು. ಆ ಗುರಿ ಜೀವನದ ಎಲ್ಲ ಕ್ಷೇತ್ರಗಳಲ್ಲೂ 'ಉತ್ಕರ್ಷ ಅಥವಾ ಉತ್ತಮತ್ವ'ದ ಆರಾಧನೆಯೇ ಆಗಿದೆ. ಇದು ಶಿಕ್ಷಣದ ಸಾರವಾಗಬೇಕು.

ಉತ್ತಮ ಮಾನವರಾಗಬೇಕೆಂಬ ಆಸೆ ನಮ್ಮೆಲ್ಲರಲ್ಲೂ ಐಕ್ಯತೆಯನ್ನು ತರಲಾರದೇ? ಜೀವನಕ್ಕೆ ಇದೇ ಉದ್ದೇಶವಾಗಲಾರದೇ?

ಕವಿವಾಣಿ ನಮ್ಮ ಅಭಿಪ್ರಾಯವನ್ನು ಸಮರ್ಥಿಸುವುದು:

Not enjoyment, and not sorrow,
Is our destined end or way ;
But to act, that each tomorrow
Finds us further than to-day.





# ರುಕ್ಮಿಣೀ ಸ್ವಯಂವರದ ಕಥಾಪ್ರಪಂಚ

ಶ್ರೀ ಕೆ. ವೆಂಕಟರಾಯಾಚಾರ್ಯ, ಸುರತ್ಕಲ್ಲು

**ದಶಾವತಾರಗಳು—** ಶ್ರೀಮನ್ನಾರಾಯಣನ ಅವತಾರಗಳಲ್ಲಿ 'ಹತ್ತು'ಗಳನ್ನು (ಆಯ್ದು, 'ದಶಾವತಾರ'ವೆಂದು ಹೆಸರಿಟ್ಟು, ಅವುಗಳನ್ನು ಕುರಿತು ಹಲವಾರು ಗ್ರಂಥಗಳು) ಸ್ತೋತ್ರರಾಶಿಗಳನ್ನು ಕೃತಿಸುವ ಕ್ರಮವು ಪುರಾಣಯುಗದಿಂದ ಆರಂಭವಾಗಿದೆಂದು ಹೇಳಬಹುದು. ಈ ಅವತಾರಗಳಲ್ಲಿ ಮೊದಲ ಮೂರು ಕೇವಲ ಪ್ರಾಣಿಗಳಾಗಿದ್ದರೆ, ನಾಲ್ಕನೆಯದು ಪ್ರಾಣಿ ಮತ್ತು ಮಾನವನನ್ನು ಬೆರಸಿದುದು ಇನ್ನುಳಿದ ಆರೂ ಮಾನಸಿಕಗಳಾಗಿವೆ (ಬುದ್ಧಾವತಾರದ ಬದಲು ಬಲರಾಮನನ್ನು ಹೆಸರಿಸುವ ಪರಿಪಾಟಿಯು ಕೆಲವರಲ್ಲಿ (ಜೈನರಲ್ಲಿ)ದೆಂದು ತೋರುವುದು, ಬುದ್ಧನು ಐತಿಹಾಸಿಕ ಯುಗಕ್ಕೆ ಒಳಪಟ್ಟವನೆಂದೋ, ತಾತ್ವಿಕವಿಚಾರಗಳಲ್ಲಿ ಇತರ ಅವತಾರಗಳಂತೆ ಇರದುದರಿಂದಲೋ, ಹಾಗೆ ಲೆಕ್ಕಿಸಿರಬೇಕು.) ಆ ಕೊನೆಯ ಕಲ್ಕಿಯು ಈಗ ನಡೆಯುವ ಕಲಿಯುಗದ ಕೊನೆಗೇನೇ ಆಗಲಿದೆಯೆಂದು ಪೌರಾಣಿಕ ವರ್ಣನೆಯಿದೆ; ಆದುದರಿಂದ, ಇದೊಂದನ್ನು ಬಿಟ್ಟು, ಉಳಿದ ಒಂಬತ್ತು ಅವತಾರಗಳ ಪ್ರಭಾವವು ಭಾರತ ದೇಶದಲ್ಲಿ ಹರಡಿದ್ದ ಕುರುಹುಗಳಿವೆ.

ವಾಮನನು ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ತುಳಿದುದೆಂಬುದರ ನೆನಹಿಗಾಗಿ 'ತುಳುನಾಡಿ'ನಲ್ಲಿ (ಇದು ಪಾತಾಳವೆಂದು ಆ ಸಾಹಿತ್ಯದಲ್ಲಿದೆಯಂತೆ!) ವಿಶೇಷವಾಗಿ (ಇತರತ್ರ ಸಾಧಾರಣವಾಗಿಯೂ) ಬಲಿಯ ಪೂಜೆ ಹಾಡುಗಳ ಪ್ರಸಾರವಿದೆ. ಪರಶುರಾಮನು ಇಪ್ಪತ್ತೊಂದು ಬಾರಿ ಭಾರತದ ಕ್ಷತ್ರಿಯ ವೀರರನ್ನು ಕೊಂದು, ಕೊನೆಯ ಯುಗದಲ್ಲಿ ಅದೆಲ್ಲಾ ನೆಲವನ್ನು ಕಶ್ಯಪರಿಗೆ ದಾನವಿತ್ತನೆಂದೂ, ಆಮೇಲೆ–ತಾನಿರಲು-ಉಂಟುಮಾಡಿದುದು 'ಪರಶುರಾಮಕ್ಷೇತ್ರ'ವೆಂದೂ, ದಾನವಿತ್ತುಳಿದುದು – ರಾಮಕ್ಷೇತ್ರವೆಂದೂ ಹೇಳುವರು! ಆದಿಕವಿಯಾದ ವಾಲ್ಮೀಕಿರಚಿತ ರಾಮಾಯಣವೇ ಮೊದಲಾಗಿ ಹಲವು ಉದ್ಭಕೃತಿಗಳು ಹಲವು ಭಾಷೆಗಳಲ್ಲಿರುವುದೇ ರಾಮಾವತಾರಕ್ಕೆ ಸಾಕ್ಷಿಯಾಗಿದೆ.

ಶ್ರೀಕೃಷ್ಣನು ಇಂದಿಗೆ ಸುಮಾರು ಅಯ್ದು ಸಾವಿರ ವರುಷಗಳ ಹಿಂದೆ ಇದ್ದನೆಂಬುದಕ್ಕೆ—ಹಲವಾರು ಚಾರಿತ್ರಕ ಸಂಶೋಧಕರು ಸಾಧಿಸುವುದರೊಂದಿಗೆ, ಆತನ ಸಂಬಂಧದ ಕತೆಯುಳ್ಳ ಭಾಗವತ, ಭಾರತ, ಭಗವದ್ಗೀತೆ, ವಿಷ್ಣುಪುರಾಣ, ಹರಿವಂಶ ಮುಂತಾದ ಹಲವು ಹಿಂದಲ ಉಲ್ಲೇಖಗಳಿವೆ. ಈ ಸಾಲಿನ ಕೊನೆಯ ಬುದ್ಧನಾದರೋ ಈಗಲೂ ಭಾರತೇತರ ಹಾಗೂ ಭಾರತದ ಕೆಲವೆಡೆಯಾದರೂ ಪ್ರಸಾರವುಳ್ಳ ಮತಗ್ರಂಥಗಳಿಂದ ತಿಳಿದುದೇ ಸೈ (ಈ ಬದಲು 'ಬಲರಾಮ'ನಾದರೆ, ಕೃಷ್ಣಾವತಾರ ದಂಡಾದುದು.)

ಈ ಅಯ್ದು ಅವತಾರದ ಕುರಿತು ಜೈನವಾಙ್ಮಯದಲ್ಲಿ ಬೇರೆ ತೆರದಿಂದ ಸಾಗಿದಂತಿದೆ: ವಾಮನನು ಆದೊಬ್ಬ ಸಾಮಾನ್ಯಮನುಷ್ಯ. (ಧರ್ಮಾಮೃತ, ನೇಮಿಪುರಾಣಗಳನ್ನು ನೋಡಿರಿ). ಪರಶುರಾಮನನ್ನು ಸುಭೌಮನು ಕೊಂದುದು (ಉತ್ತರಪುರಾಣ). ಲಕ್ಷ್ಮಣನೇ ರಾವಣನನ್ನು ಕೊಂದವನು (ಪಂಪರಾಮಾಯಣ). ಬಲರಾಮನೇ 'ಶಲಾಕಾಪುರುಷ'ನು ಇನ್ನು ಬುದ್ಧನ ಬದಲಾಗಿ, ('ಋಷಭಾವತಾರ'ವೇ) ಜೈನ ಸಂಪ್ರದಾಯದವ (ಮೊದಲ ತೀರ್ಥಂಕರ)ನೆಂದು ಇದೆ. ಇವರೆಲ್ಲರ ಕುರಿತು ಆಯಾ ಗ್ರಂಥಗಳಲ್ಲಿ ವಿಸ್ತಾರಿತವಾಗಿದೆ. ಈ ಅವತಾರಗಳ ಪ್ರಭಾವ ವ್ಯಾಪಕತೆಗಳಿಂದ ಹೀಗೆಲ್ಲಾ ಸಮಾಕರಿಸಿರಬಹುದು!

**ಕೃಷ್ಣನ ಹಿರಿಮೆ:—** ಈ ಅಯ್ದು ಅವತಾರಗಳಲ್ಲಿ ಹೆಚ್ಚಿನ ಮಟ್ಟಿಗೆ ಕೃಷ್ಣನಿಗೇನೇ ಹಿರಿತನ (ಹಿರಿಮೆ)ವು ಸಲ್ಲುವುದೆಂದರೆ ತಪ್ಪಲ್ಲ! ಮಿಕ್ಕವು ಕೆಲವೊಂದು ಸಂದರ್ಭಗಳಲ್ಲಿ ಮಾತ್ರ ಜಾಜ್ವಲ್ಯಮಾನವಾಗಿದ್ದರೆ, ಕೃಷ್ಣನು ಹಲವಾರು ಮಹತ್ಕಾರ್ಯಗಳ ಹಿನ್ನೆಲೆಯಾಗಿಯೂ, ತಾನಾಗಿ ಹಲವು ದುಷ್ಟರನ್ನು ನಿರ್ಮೂಲಿಸುತ್ತಲೂ, ಕೆಲವರನ್ನು ತನ್ನವರಿಂದ ಕೊಲ್ಲಿಸಿಯೂ ಇದ್ದಾನೆ. ಧಾರ್ಮಿಕಗ್ರಂಥ (ಪ್ರಸ್ಥಾನ) ತ್ರಯಗಳಿಂದು ಮತತ್ರಯಗಳಿಂದ (ದ್ವೈತ, ಅದ್ವೈತ, ವಿಶಿಷ್ಟಾದ್ವೈತ) ಹೆಸರಿಸಲ್ಪಟ್ಟವುಗಳಲ್ಲಿ ಒಂದಾದ 'ಭಗವದ್ಗೀತೆಯ ಆಚಾರ್ಯ'ನಿವನು!

ಇನ್ನು, ಈತನ ನಡೆವಳಿಯೂ ವಿಚಿತ್ರವೆಂದು ತೋರದಿರದು! ಒಮ್ಮೆ 'ಅಷ್ಟಮಹಿಷಿಯರ ಪತಿರಾಜ

ನಾದನು, ಮತ್ತೆ ಹದಿನಾರು ಸಾವಿರ ಸ್ತ್ರೀಯರ ವಲ್ಲಭ ನಾದನು. ಇವರೆಲ್ಲರನ್ನೂ ಒಂದಾನೊಂದು ಗೆಲ್ಲ ದಿಂದಲೇ ಪಡೆದು, ತನ್ನ ಬೀರತನವನ್ನು ಪ್ರಕಟಿಸಿದ್ದನು. (ಹದಿನಾರು ಸಾವಿರ ಸ್ತ್ರೀಯರ ಹೆಸರು ಪುರಾಣಗಳಲ್ಲಿ ಪರಿಶೋಧನೀಯವು. 'ಅಷ್ಟಮಹಿಷಿ'ಯರೆಂದರೆ— ರುಕ್ಮಿಣಿ, ಸತ್ಯಭಾಮೆ, ಜಾಂಬವತಿ, ಕಾಲಿಂದಿ, ಮಿತ್ರ ವಿಂದೆ, ನೀಲೆ, ಭದ್ರೆ, ಲಕ್ಷಣೆಯರು). ಈ ಹೆಂಡರಲ್ಲಿ ಮೊತ್ತಮೊದಲು ಮದುವೆಯಾದ, ಅತ ಏವ ಹಿರಿಯ ರಾಣಿಪಟ್ಟದ ರುಕ್ಮಿಣಿಯ ವಿವಾಹದ ಕತೆಯು ಪುರಾಣ ಗಳಲ್ಲಿ ಹೇಗೆ ಪ್ರಪಂಚಿತವಾಗಿದೆಂದು ಈ ಬರೆಹ ದಲ್ಲಿ ಸೂಚಿಸಲೆಳಸಿದೆ, ಅದರಲ್ಲೂ ತಕ್ಕುಪೇನೆಂದು ಕಾಣಲು ಪ್ರಯತ್ನಿಸಿದೆ. ಈ ವಸ್ತುವನ್ನು ಬಳಸಿ ಹಲವು ತೆರದಲ್ಲಿ—ಹರಿಕೀರ್ತನೆ, ನಾಟಕ, ಯಕ್ಷಗಾನ, ಕಾವ್ಯಗಳು — ಕೃತಿಗಳನ್ನು ಹೆಣೆಯಬಹುದೆಂದು ಬಗೆದು, ಇದರ ಲಘುಪರಿಚಯವನ್ನು ಮಾಡಲೆಳಸಿದೆ. ವಾಚಕರು ಅಂತಹ ಪ್ರಯೋಜನ ಹೊಂದುವಂ ತಾದರೆ, ಈ ಲೇಖಕನ ಆಸೆ ಸಫಲಿತವಾಯ್ತೆಂದು ವಿನಂತಿ.

**(೧) ಹರಿವಂಶದಿಂದ—** ಮಹಾಭಾರತದ ಖಿಲ (ಅನುಬಂಧ, ಪರಿಶಿಷ್ಟ) ರೂಪವಾದ 'ಹರಿವಂಶ'ವು ವ್ಯಾಸರಿಂದಲೇ ರಚಿತವಾದುದು, ಭಾರತದ 'ಹತ್ತೊಂ ಬತ್ತನೆಯ ಪರ್ವ'ವೆಂಬಷ್ಟು ಹೊಂದಿಕೆಯಿದೆ, ಇದನ್ನು ಸಂತಾನಾಪೇಕ್ಷಿ'ಗಳು ಓದಬೇಕೆಂದು 'ಕರ್ಮವಿಪಾಕ' ಮೊದಲಾದ ಗ್ರಂಥಗಳಲ್ಲಿ (ಪಾಪದ ಪ್ರಾಯಶ್ಚಿತ್ತಗಳನ್ನು ವಿಧಿಸುವ ಜ್ಯೋತಿಷ್ಯ ಗ್ರಂಥಗಳು) ಹೇಳಿದೆಯಂತೆ! ಈ ಗ್ರಂಥದ ಸಟೀಕಾ ಹಸ್ತಪ್ರತಿಯೊಂದು ನನ್ನ ನೆರೆಯ ಶ್ರೀ ಚಿತ್ರಾಪುರ ಮಠದಲ್ಲಿದೆ. ಅದು "ಔರಂಗಾ ಬಾದಿನ ಬಾಳಾಜಿ ಗೋವಿಂದರ ಲೇಖಕ ಕೃಷ್ಣರಾವ ರಘುನಾಥನಿಂದ ಶಾ. ಶಕ ೧೭೫೬ನೆಯ ಜಯ ಸಂವತ್ಸರದ ಮಾರ್ಗಶೀರ್ಷ ಕೃಷ್ಣ ೧೧ ಶುಕ್ರವಾರ ದಂದು ಪೂರೈಸಿದುದು, ಮೋತಿಶಿಂಗ ಅನಂತರಾಮ ಪಂಥರ ಮಗ ವೆಂಕಟರಾಯರ ಕೃಷ್ಣಾರ್ಪಣ ಪುರಸ್ಸರ ವಾಗಿ ಉಡುಪಿ ವಿಜಯಧ್ವಜಾಚಾರ್ಯರ ಮಠದ ವಿದ್ಯಾ ಸಾಗರ ತೀರ್ಥ ಶ್ರೀಪಾದಂಗಳವರಿಗೆ ಕೊಟ್ಟಿರುತ್ತಾರೆ", ಎಂದು ತಿಳಿಯುತ್ತೆ. ಇದನ್ನು ನೋಡಿಕೊಳ್ಳಲು ಅನುಮತಿಸಿದುದಕ್ಕೆ ಆ ಮಠದ ಈಗಣ ಸ್ವಾಮಿಗಳಾದ ಶ್ರೀ ವಿದ್ಯಾಪೂರ್ಣ ತೀರ್ಥರಿಗೆ ಕೃತಜ್ಞತಾಪೂರ್ವಕ ವಂದನೆಗಳನ್ನು ನಿವೇದಿಸುತ್ತೇನೆ.

**ಮೊದಲಕತೆ—** ಶ್ರೀಕೃಷ್ಣ ಬಲರಾಮರು ಗೋಮಂತದಲ್ಲಿ ಜರಾಸಂಧನನ್ನು ಗೆದ್ದು, ಮಥುರೆಗೆ ಹಿಂದೆ ಬಂದಿದ್ದರು.

ಒಮ್ಮೆ ಲೋಕಸಮಾಚಾರವನ್ನು ತಿಳಿಯಕಳುಹಿದ್ದ ರೂಹಿನವರು ಬಂದು, ಸಭೆಯಲ್ಲಿ ವಿನಂತಿಸುವರು: ರುಕ್ಮಿಯ ಆಣತಿಯಂತೆ, ಅನೇಕ ರಾಜರು ಕುಂಡಿನ ಪುರಕ್ಕೆ ಸಾಗುವರು, ಅಲ್ಲಿ ಇಂದಿನಿಂದ ಮೂರನೆಯ ದಿನದಂದು ರುಕ್ಮಿಣಿಯ ಸ್ವಯಂವರವು ನಡೆವುದು!

ಇದನ್ನು ಕೇಳಿದ ಕೃಷ್ಣನ ಎದೆಗೆ 'ಶೂಲ ವಿಟ್ಟಂ'ತಾಯ್ತು. ಮತ್ತೆ ಲಗುಬಗೆಯಿಂದಲ್ಲಿಗೆ ಸಾಗಿ ದನು (ಯಾದವಸೇನೆಯು ಹಿಂದಿನಿಂದ ಬರುತ್ತಿತ್ತು), ಸಂಜೆಗೆಂಪಿಗೆ ಸರಿಯಾಗಿ ತಲಪಿದನು. ಆ ದೂರದಲ್ಲೇ ಕಾಣುವ ಬಿಡಾರಗಳು, ದೊಡ್ಡ ರಂಗಮಂಟಪ ಮೊದ ಲಾದುವನ್ನು ನೋಡಿ; ತನ್ನ ದಿವ್ಯತೆಯನ್ನು ಅವರೆಲ್ಲರಿಗೆ ತೋರಿಸಲು, ಗರುಡನನ್ನೇರಿದ್ದನು. ಭೀಷ್ಮಕನು ಇದಿರಾಗಿ ಕರೆದೊಯ್ದು, ಬಿಡಾರದಲ್ಲಿರಿಸಿ, ಸತ್ಕರಿಸಿ ದನು (೧೦೬ ಅಧ್ಯಾಯ, ಶ್ಲೋಕ ೨೪.)

**ಕಾರಸ್ಥಾನ—** ಇತ್ತ ಕೆಲವರು ಕೃಷ್ಣಾಗಮನ ದಿಂದ ತಳಮಳವಾಗಿ, ಒಟ್ಟಾಗಿ ಯೋಚಿಸುತ್ತಿದ್ದರು. ಅವರಲ್ಲೊಬ್ಬ ಜರಾಸಂಧನು ಮಾತಿಗೆ ಮೊದಲು ಮಾಡಿದನು: "ನಾನು ಯೋಚಿಸಿದುದೆಂದರೆ, ಕೃಷ್ಣನು ಈ ಕನ್ಯೆಗಾಗಿ ಅವಶ್ಯ ಯತ್ನಿಸುವನು. ಇದಕ್ಕೆ ತಕ್ಕ ಸಮಾಧಾನಯತ್ನಗಳನ್ನು ಮಾಡಲೇ ಬೇಕು. ಆ ರಾಮಕೃಷ್ಣರು ಒಬ್ಬಂಟಿಗರಾಗಿ ನಡೆಸಿದ ಕೆಲಸಗಳು ನಿಮಗೆಲ್ಲಾ ತಿಳಿದುವೇ ಆಗಿವೆ. ಈಗ ಒತ್ತಿಗೆ ಗರುಡನೂ ಯಾದವ ಪಡೆಯೂ ಇವೆ, ಇಂತಹನನ್ನು ಎದುರಿಸಲು ಅದಾರಿಗೆ ತಾನೇ ಸಾಧ್ಯ? ಈ ಮೊದಲು, ವರಾಹ ನರಸಿಂಹ ವಾಮನ ಪರಶುರಾಮ ದಾಶರಥಿಯಾಗಿ, ಹಲವು ರಕ್ಕಸರನ್ನು ಕೊಂದನು. 'ತಾರಕಾಮಯ' ಯುದ್ಧದಲ್ಲಿ ಕಾಲನೇಮಿ ಮುಂತಾದವರನ್ನು ಗೆದ್ದನು, ಇನ್ನು, ಬಾಲ್ಯದಲ್ಲಿ ಅನೇಕ ದೈತ್ಯರನ್ನು ಕೊಂದನು. ಇದೆಲ್ಲಾ ನೋಡುವಾಗ, ಇವನು ಶ್ರೀಹರಿಯೆಂದೇ ತಿಳಿವೆನು, ಹಾಗಲ್ಲದಿದ್ದರೆ ಗರುಡನು ವಾಹನನಾಗುವು ದೆಂತು? ಇವನು ಸ್ವಯಂವರಕ್ಕಾಗಿ ಬಂದವನಲ್ಲ, ಆದರೂ ಇಲ್ಲಿಗೆ ಬಂದುದು ಒಳ್ಳಿತಲ್ಲ. ಇದನ್ನೆಲ್ಲಾ ನೆನಪಿಟ್ಟು ನೀವೇ ಯೋಚಿಸಿ ಹೇಳಿರಿ!"

ಆಗ 'ಅರಿವಿನ ಪಂಡಿತ'ನಾದ ಸುನೀಥ (ಶಿಶುಪಾಲ)ನು ಎದ್ದು ಹೇಳಿದನು—ಜರಾಸಂಧನು

ಹೇಳಿದುದು ಸರಿಯೆ! ಬರಿಯ ಒಮ್ಮೆಯು ಇವರಿಬ್ಬರ ಸಾಹಸವನ್ನು ಅನುಭವಿಸಿದ್ದು, ಮುಂದೆ ತಕ್ಕಂತೆ ಯೋಚಿಸ ಹೇಳಿದನು. ಈ ಗರುಡನು ಬರುವಾಗಣ ಅವಸ್ಥಾಂತರಗಳನ್ನು ರೆಕ್ಕೆಯ ಬಡಿತದಿಂದಲೇ ಅನೇಕರು ಮೈಮರೆದು ಬಿದ್ದುದು—ನೋಡಿದ್ದೀರಿ. ಆದರಿಂದಲೇ ಹೌಹಾರಿದ್ದೆವು, ಯುದ್ಧಕ್ಕೆ ನಿಂತರೆ ಹೇಳಬೇಕೇ? ಇನ್ನು, ಸ್ವಯಂವರವೆಂಬುದು ಅರಸರಿಗೊಂದು ಹಬ್ಬ. ರುಕ್ಮಿಣಿಯು ಇನ್ನೊಬ್ಬನನ್ನು ವರಿಸಿದರೆ, ಆ ಕೃಷ್ಣನ ಸಾಹಸ ತಡೆವವರಾರು? ಸ್ವಯಂವರವೆಂದು ಗುಲ್ಲುಹರಡಿದುದೇ ದೋಷವಾಯ್ತು. ನಾವೂ (ಕೃಷ್ಣನೂ) ಬಂದೆವು! 'ಅವನ ಬರುವಿಕೆಗೆ ನಾವೆಲ್ಲಾ ಸುಮ್ಮನಾಗುವೆವೆಂ'ಬ ಜರಾಸಂಧನ ನುಡಿ ದಿಟವು. (೧೦೭ ಅಧ್ಯಾಯ, ಶ್ಲೋಕ ೫೩.)

ಇದನ್ನು ಕೇಳಿ, ವೀರನಾದ ದಂತವಕ್ರನು ಮಾತಾಡತೊಡಗಿದನು—ಇವರಿಬ್ಬರ ಮಾತೂ ಸರಿ; ಅದಕ್ಕೆದುರಾಗಿಯೋ, ತನ್ನ ಗೆಲ್ಮೆಯಿಂದಲೋ, ಹೆಮ್ಮೆಯಿಂದಲೋ ತೆಗಳುವುದಿಲ್ಲ. ಆದರೂ ನೆನಹಿಗಾಗಿ ಒಂದೆರಡು ನುಡಿಯುವೆನು. ಕೃಷ್ಣನು ಬಂದನೆಂದರೆ, ಅದೇನು ದಿಗಿಲು? ನಮ್ಮಂತೆ ಬಂದಿದ್ದಾನೆ, ಇಲ್ಲೇನು ಗುಟ್ಟು? ಇನ್ನು, ಆ ಗೋಮಂತದ ಪ್ರಸ್ತಾವವು ತಕ್ಕಂತಾಗಿಲ್ಲ. ಮತ್ತೆ ಕಾಡಾಡಿಗಳಾದ ಅವರು ಬಲದಿಂದ ಆನೆ ಮಲ್ಲ ಕಂಸರನ್ನು ಕೊಂದುದೊಂದು ಕದನವೇ? ನಾವು ಹೋದಲ್ಲಿ ಜಗಳವೇ ಸಿದ್ಧವಾದರೂ, ಇಲ್ಲಿ ಸ್ವಯಂವರಕ್ಕಾಗಿ ಕಲೆತಿದ್ದೇವೆ. ಜರಾಸಂಧನೆಂದಂತೆ 'ಕೃಷ್ಣನು ದುಷ್ಟರಿಗೆ ದುಷ್ಟನಾ'ದರೂ, ಸುಷ್ಟರಿಗೆ ಸುಷ್ಟನಷ್ಟೆ! ಅವನು ಬರಿಯ ಕೀಳನಲ್ಲೆಂದು ತಿಳಿದೆನು, ಯುದ್ಧಕ್ಕಾಗಿ ಬಂದುದಾದರೆ ಸೇನೆ ಬೇಡವಿತ್ತು, ಇದೊಂದು ಯಾತ್ರಾನೆಪದಿಂದ ಬಂದವನಿಗೆ ತಕ್ಕ ಉಪಚರಿಸಿ, ಮನ್ನಿಸೋಣ. ಈ ಒಪ್ಪಂದವಿದ್ದರೆ, ನಮಗೆ ಆತನಿಂದೇನೂ ಬಾಧೆ ಬರದೆಂದು ತೋರುತ್ತೆ.

ಆ ಮಾತು ಕೇಳಿ, 'ಮಾತಿನ ಮಲ್ಲ'ನಾದ ಸಾಲ್ವನು ಆಡಿದನು-ನೀವು ಹೀಗೆಲ್ಲಾ ಗೊಣಗುಟ್ಟುವುದೇಕೆ? ಅವನೊಬ್ಬನು ಬಂದರೆ, ನಾವೆಲ್ಲಾ ಕೈಗಟ್ಟಿ ನಿಲ್ಲಬೇಕೇ? ನಾವೂ ಕ್ಷತ್ರಿಯರಲ್ಲವೇ? ನಾನು ಹೇಳುವುದೆಂದರೆ, ಕೃಷ್ಣನು ನಮ್ಮಂತಲ್ಲ, ಕಂಸನೇ ಮೊದಲಾದ ನಮ್ಮನ್ನೆಲ್ಲಾ ಹರಿಸಿ ಭಾರಾವತರಣಕ್ಕೆ ಬಂದ ಶ್ರೀಹರಿಯೇ ಸೈ! ಅವನೊಡನೆ ಹೊರಾಡಿ ಸಾಯುವ; ಸಮಯ ಬಂದರೇನೇ ಸಾವು ಬದುಕುಗಳು. ಇನ್ನು, ನಾವೆಲ್ಲಾ ಕಲೆತುದು ಯುದ್ಧಕ್ಕಲ್ಲ, ಕನ್ಯೆಯು ಯಾರನ್ನೋ ವರಿಸಿದರೆ ಯುದ್ಧವೇಕೆ? ಅರಸರಿಗೆ ಹಬ್ಬವಿದೇ ಸೈ! ಅವರು ಹೀಗೆಲ್ಲಾ ಬೇರೆಬೇರೆ ತೆರದಲ್ಲಿ ಮಾತಾಡಲು, ಭೀಷ್ಮಕನು—ಮಗನಿಗಾಗಿ ಬಾಯ್ದೆರೆದು ಏನನ್ನು ಹೇಳದಿದ್ದರೂ—ಮನದಲ್ಲಿ ಹೀಗೆ ಬಗೆದನು:— ರುಕ್ಮಿಯು 'ಭಾರ್ಗವಾಸ್ತ್ರಧಾರಿ', ಕೃಷ್ಣನೊಡನೆ ಯಾವಾಗಲೂ ಎದುರಾಳಿ. (ಕಂಸನು ಸತ್ತೊಡನೆ ಜರಾಸಂಧನೊಂದಿಗೆ ಕೃಷ್ಣನ ಯುದ್ಧಕ್ಕೆ ಸಾರಿದ್ದನು. ಅಧ್ಯಾಯ ೯೪.) ಇತ್ತ ಕೃಷ್ಣನು ಬಲಾತ್ಕಾರದಿಂದಲಾದರೂ, ರುಕ್ಮಿಣಿಯನ್ನು ಅಪಹರಿಸುವುದೇ ಸೈ, ಆಗ ಕದನವು ಕಟ್ಟಿಟ್ಟಂತೆ! ಮಗನಿಂದಾಗಿ ಯುದ್ಧ, ಈ ಮಗನು ಬದುಕಿರುವುದೇಕೆ? ಕೃಷ್ಣನೊಂದಿಗೆ ಹೋರಾಡಿದರೆ ನಾವೇ ಸೈ. ನನ್ನ ಮಗಳಿಗಾಗಿ ಕೃಷ್ಣನೊಡನೆ ಹೋರಾಡಲು ಈ ತಯಾರಿಕೆಯೇ? 'ಕೃಷ್ಣನು ವರ'ನೆಂದು ರುಕ್ಮಿ ಒಪ್ಪನು, ಅವರಿಬ್ಬರು ಹತ್ತಿಬೆಂಕಿಯಂತಿದ್ದಾರೆ! ಕರವೀರದರಸನು ಬಹಳ ಬಲಿಷ್ಠನಾದರೂ, ಕೃಷ್ಣನಿಂದ ತೀರಿದನು. ಗೋವರ್ಧನಧಾರಣ, ಇಂದ್ರಕೃತ ಅಭಿಷೇಕ, ಕಾಲೀನಿಗ್ರಹ, ಕಂಸದೂತರ ವಧೆ, ಗುರುಪುತ್ರನಿಗಾಗಿ ಪಂಚಜನನನ್ನು ಕೊಂದು ಯಮನನ್ನು ಕಂಡುದು, 'ಚತುರಂಗಕ್ಕೆ ಪ್ರತಿ ಚತುರಂಗ'ನಾಗಿ ಗೋಮಂತದಲ್ಲಿ ನಡೆಸಿದ ಪ್ರತೀಕಾರಗಳನ್ನೆಲ್ಲಾ ನೆನೆದು ನನ್ನ ಮನಕ್ಕೆ ನೆಮ್ಮದಿಯಿಲ್ಲ.. ದಂತವಕ್ರನೆಂದಂತೆ, ಉಪಚರಿಸಿ ಒಪ್ಪಂದ ಮಾಡುವೆನೆಂದುಕೊಂಡನು.

ಆ ರಾತ್ರಿ ಎಲ್ಲರೂ ವಿಶ್ರಮಿಸಿ, ಬೆಳಗಿನ ನಿತ್ಯವಿಧಿ ತೀರಿಸಿ, ಸಭೆಗೆ ಬಂದರು. ಆಗ ಬಂದ ತಮ್ಮ ದೂತನಿಂದ 'ಕೈಶಿಕನು ಮಾಡುವ ಕೃಷ್ಣಾಭಿಷೇಕ'ದ ಸುದ್ದಿ ತಿಳಿದು, ಕೆಲವರು ಸಂತಸಗೊಂಡರು, ಕೆಲರು ಉದಾಸೀನರಾದರು, ಕೆಲವರಿಗೆ ಸಿಟ್ಟು ಹದಮೀರಿತು, ಕಡಲಿನಂತೆ ಮೂರು ತೆರವನ್ನು ತಾಳಿದರು! ಭೀಷ್ಮಕನು 'ಕೈಶಿಕನ ದಬ್ಬಾಳಿಕೆ'ಗೆ ಕುದಿಯುತ್ತಿದ್ದರೂ, ಕೃಷ್ಣಾದಿಗಳನ್ನು ಸಂತೈಸಲು, ಅಲ್ಲಿಗೆ ನಡೆದನು. ಆಗಲೇ ಕೈಶಿಕನ ಓಲೆಕಾರರು ಭೀಷ್ಮಕನ ಸಭೆಗೆ ಬಂದರು (೧೦೮ ಅ. ಶ್ಲೋಕ ೬೯.)

**ರುಕ್ಮಿಯ ವಂಶ**—(ಅಧ್ಯಾಯ ೧೧೯ ರಿಂದ). ಯಾದವನಿಗೆ ಜನಿಸಿದ ವಿದರ್ಭನು ವಿಂಧ್ಯದ ತೆಂಕಲ ವಿದರ್ಭ ದೇಶವನ್ನು ಆಳುತ್ತಿದ್ದನು. ಅವನಿಗೆ ಕ್ರಥ, ಕೈಶಿಕ ಮೊದಲಾದ ಮಕ್ಕಳಿದ್ದರು. ಈ ಕೈಶಿಕನಿಗೆ

ಭೀಷ್ಮಕನು ಜನಿಸಿದನು. ಇವನಿಗೆ ಹಿರಣ್ಯರೋಮನೆಂಬ ಬೇರೊಂದು ಹೆಸರಿದೆ. ಇವನು ಆಗ್ನೇಯ ಭಾಗದ ಅರಸಾಗಿದ್ದನು. ಇವನ ಮಗನು ರುಕ್ಮಿ, ಮಗಳು ರುಕ್ಮಿಣಿ.

**ಕೃಷ್ಣಾಭಿಷೇಕ** (ಅಧ್ಯಾಯ ೧೧೯)— ಕೃಷ್ಣನು ವಿದರ್ಭಕ್ಕೆ ಬರಲು ಕೈಶಿಕನು ತನ್ನ ಮನದಲ್ಲೇ ಹೀಗೆ ಬಗೆದನು—ಈತನ ನೋಟದಿಂದಲೇ ಪಾಪವೆಲ್ಲಾ ಹಿಂಗುವುದು, ನಮ್ಮಿಬ್ಬರಿಗೂ (ಕ್ರಥನಿಗೆ) 'ಕುದ್ಧ' ನೆಂದು ಮನವರಿಕೆಯಿದೆ. ಇವನ ಹೊರತು ತಕ್ಕವರು ಮೂಲೋಕದಲ್ಲಿಯೂ ಬೇರಾವನು? ಇವನಿಗೆ ನಾವೇನು ಸತ್ಕಾರ ಮಾಡೇವು? ತಮ್ಮನೊಂದಿಗೆ ಯೋಚಿಸುವೆನೆಂದು, ಆಲೋಚಿಸಿದನು. ಮತ್ತು ತಮ್ಮ ರಾಜ್ಯವನ್ನೇ ಎರೆಯುವರಂತೆ ನಿಶ್ಚೈಸಿದರು. "ನಮ್ಮಿಬ್ಬರ ಜನ್ಮ ಸಾಫಲ್ಯವೂ, ನಮ್ಮ ಪಿತೃಗಳಿಗೆ ತೃಪ್ತಿಯೂ ಆಯ್ತು. ಇಂದ್ರಾಭಿಷಿಕ್ತನಾದ ನಿನಗೆ ನಮ್ಮ ರಾಜ್ಯವನ್ನು ಎರೆಯುವೆವು. "ರಾಜ್ಯದ ಪಟ್ಟಾಭಿಷೇಕವಾಗಿಲ್ಲದ ಕಾರಣ ಈ ಸ್ವಯಂವರಕ್ಕೆ ಕೃಷ್ಣನು ಬಾರನು. ಈ ರಾಜರೆಲ್ಲಾ ಗದ್ದುಗೆ ಏರಿರಲು ಇವರೆದುರು ಬರಿಯ ಮಣೆಯಲ್ಲಿ ಕೃಷ್ಣನು ಕುಳಿತಾನೇ?" ಎಂದು ಜರಾಸಂಧನು ಸಭೆ ಸಮಾಜಗಳಲ್ಲಿ ದೊಡ್ಡ ಕೂಗೆಬ್ಬಿಸುವನು. ಅದನ್ನು ಹೋಗಾಡಲು, ನಿನ್ನಾ ಬಿಡಾರ ನಮ್ಮಂತೆ ದೂರವಿರಲೆಂದು ಮಾಡಿದುದಕ್ಕೋ, ತಕ್ಕಂತೆ ಈ ಅಭಿಷೇಕಕ್ಕೊಪ್ಪಬೇಕೆಂದು ಕೃಷ್ಣನಿಗೆ ವಿಜ್ಞಾಪಿಸಿದನು.

ಮತ್ತೆ ಕೈಶಿಕನು ಕುಂಡಿನಕ್ಕೆ ಓಲೆಯೊಂದು ಕಳುಹಬಯಸಿದರು.—ಈ ಗರುಡವಾಹನನು ಆಮಂತ್ರಣವಿಲ್ಲದೆ ಅತಿಥಿಯಾಗಿ ಬಂದುದು ನಿಮಗೆಲ್ಲಾ ಗೊತ್ತಿದೆ. ಅವನು ತಕ್ಕವನೆಂದು, ನಮ್ಮ ರಾಜ್ಯವನ್ನು ಅಭಿಷೇಕಿಸುವೆವು. 'ತನ್ನ ತಮ್ಮನು ಕೊಟ್ಟ ಆಸನದಲ್ಲಿ ಕುಳ್ಳಿರುವುದು ಸರಿಯಲ್ಲ'ೆಂದು ಕಳುಹಿದ ದಿವ್ಯಾಸನದಲ್ಲಿ ಕುಳ್ಳಿರಿಸಿ, 'ಕುಬೇರನ ಅಷ್ಟನಿಧಿಗಳ ಅಂಶಗಳಾದೀ ಕೊಂಡಗಳಿಂದ ನೀರೆರೆವೆ'ನೆಂಬಾ ಇಂದ್ರನ ಆಣತಿಯಂತೆ ಆಗಸದಿಂದ ನೀರು ಸುರಿಯುವುದನ್ನು ನೋಡಲು ನೀವೆಲ್ಲಾ ಬರಬೇಕು. ಹಾಗೆ ಬಾರದವನು ಕೃಷ್ಣನಿಂದ ಸಾವನೆಂದು, ಆಗ ನಿಮ್ಮೆಲ್ಲರ ಒಪ್ಪಂದವಾಗಿಸುವೆನೆಂದು ಬರೆಯಿಸಿದನು.

ಆ ದೂತನು ಕುಂಡಿನಕ್ಕೆ ಬಂದಾಗಲೇ, 'ಆಕಾಶ'ವಾಣಿಯೂ ಆಯ್ತು—ಕೃಷ್ಣನೊಂದಿಗೆ ಸ್ನೇಹದಿಂದಿರಿ, ನಿಮ್ಮ ರಾಜ್ಯಪಾಲನೆಯು ಸುಸಂಘಟಿತವಾದೀತು. ನರರೂಪಿ ಶ್ರೀಹರಿಗೆ ಅಭಿಷೇಕಿಸಿ ಪೂರ್ಣ ಮನೋರಥನಾಗುವೆನು; ರಾಜ್ಯಾಭಿಷೇಕವು ದೇವರ್ಕಳಿಂದ ಸಲ್ಲದು, ಅರಸರೇ ಮಾಡಬೇಕಾದುದು, ಅಂತೆ ಕ್ರಥಕೈಶಿಕರು ಮಾಡುವಲ್ಲಿಗೆಲ್ಲರೂ ನಡೆಯಿರಿ. ಆದರೆ, ಜರಾಸಂಧ, ಸುನೀಥ, ರುಕ್ಮಿ ಸಾಲ್ವರು 'ಈ ರಂಗ ಮಂಟಪವು ಶೂನ್ಯವಾಗದಂತೆ' ಇಲ್ಲಿರಿ.

ಹಾಗೆಯೇ ಮಿಕ್ಕೆಲ್ಲರೂ ಜರಾಸಂಧಾದಿಗಳ ಒಪ್ಪಿಗೆಯಂತೆ, ಅಲ್ಲಿಗೈದಿದರು. ಆ ಸಭೆ ದೇವಸಭೆಯೇ ಸೈ. ಉತ್ತಮವೃಕ್ಷಗಳ ಅಯ್ದು ಬಗೆಯ ರಸದ ಸಂತರ್ಧಾರೆಯೂ ಆಗುತ್ತಿತ್ತು (ಆಗಸದಿಂದ). ಪಟ್ಟಾಭಿಷೇಕವು ಸಾಂಗವಾಗಿ ನೆರವೇರಿತು.

ಆಗ ಕೈಶಿಕನು—ಭೋ ದೇವ, ನೀನೊಬ್ಬ ಮಾನವನೆಂದು ಬಗೆದ ಈ ಅರಸರನ್ನು ಕ್ಷಮಿಸೆಂದು—ಅರಿಕೆ ಮಾಡಿದನು.

ಅದಕ್ಕೆ ಕೃಷ್ಣನು ಉತ್ತರವಾಗಿ ಹೇಳಿದನು—ಅರಸರು ತಂತಮ್ಮ ಧರ್ಮದಲ್ಲಿರಲು, ಅವರಲ್ಲಿ ನನಗೊಂದು ದಿನವೂ ವೈರವಿಲ್ಲ. ಅಧರ್ಮಕ್ಕೆ ಇದಿರಾಗಬೇಕೆಂಬುದೇ ನನ್ನ ಧರ್ಮವಷ್ಟೆ! ನನ್ನೀ ವರ್ತನೆಯಿಂದ ನೀವು ನೊಂದಿದ್ದರೆ, ಅದನ್ನು ಮನ್ನಿಸಿರಿ—ಎಂದು ಸಂತೈಸಿದನು (೧೯ ಅ. ಶ್ಲೋಕ ೯೫.) ಆಗ ಭೀಷ್ಮಕನು ಕೃಷ್ಣನನ್ನು ತಕ್ಕಂತೆ ಮನ್ನಿಸಿ ಹೇಳುತ್ತಿದ್ದನು: 'ಸ್ವಯಂವರ'ವೆಂದು ಸಾರಿದರೂ, ನನ್ನ ಮಗನು ಬಾಲತನದಿಂದ ತನ್ನ ತಂಗಿಯನ್ನು ಕೈಯೇರಿ ಕೊಡುವ ಹವಣಿಕೆಯಲ್ಲಿದ್ದಾನೆ ಅದಕ್ಕೆ ನನ್ನ ಸಮ್ಮತಿಯಿಲ್ಲ, ರುಕ್ಮಿಣಿಯೇ ಪ್ರತಿಯೊಬ್ಬನನ್ನೂ ಪರಿಕಿಸಿ ವರಿಸಲೆಂದು ನನ್ನೆಣಿಕೆ. ಇದೊಂದು ಮಗನ ದುಷ್ಟತನಕ್ಕಾಗಿ ಮನ್ನಿಸುವೆಯೆಂದು ಅರಿಕೆ.

**ಶ್ರೀಕೃಷ್ಣನು ಉತ್ತರಿಸಿದನು**— ಈ ರೀತಿಯ ಹುಡುಗತನದಿಂದ, ಅರಸುಪಡೆ ಚೆದುರಿತು. ನೀನಿಷ್ಟು ಪ್ರಾಯದವನಾಗಿ ಮೂಢನಾದರೆ, ವಿನಯವೇನೋ? ತಪೋಬಲದಿಂದ ಸೂರ್ಯಚಂದ್ರ ಸಮಬಲವುಳ್ಳ, ಲೋಕವಿಜೇತೃಗಳಾದ ಅರಸರ ಮುಂದೆ ಯಾವಾತನೂ ಸುಳ್ಳಾಡಿ, ದಂಡಾಗ್ನಿಯಿಂದ ಸುಡದಿರುವನೇ? 'ಶಾಸ್ತಿಯು ಅರಸರ ಧರ್ಮವೆಂಬ ಬ್ರಹ್ಮವಚನ'ವು ನಿನಗೂ ತಿಳಿದೇ ಇದೆ. ಆಗ ನಿನ್ನಾ ಮಗನು ಹೇಗೆ ಸಮರ್ಥನಾದಾನು? ಅಷ್ಟು ದೊಡ್ಡ ರಂಗಮಹಲನ್ನು ಕಟ್ಟಿಸಿಯೂ, ಆ ನಿನ್ನ ಮಗನೆಣಿಕೆ ನಿನಗೆ ತಿಳಿಯದೆಂದುದು ನನಗೆ ಸಂಶಯವೆನಿಸುವುದು. ಒಟ್ಟಾರೆ

ನಾನು ಬರುವುದೇ ನಿನಗೆ ಒಳ್ಳೆಯದೆನಿಸಲಿಲ್ಲ. ಆ ಕಾರಣ ಅಪಾತ್ರನಾದ ನನಗೆ ಹೆಚ್ಚು ಮನ್ನಿಸಿಲ್ಲ. ಬೇಕಾದವರಿಗೆ ಹೆಣ್ಣುಕೊಡು, ನನ್ನ ಬರುವಿಕೆಗೆ ತಡೆಯದಿರು, ಕನ್ಯಾದಾನಕ್ಕೆ ವಿಘ್ನಕಾರಿಗಳು ನರಕಭಾಗಿಗಳಾಗುವರೆಂದು ಮನ್ವಾದಿಗಳ ಶಾಸನದಂತೆ, ನಾನು ಅಲ್ಲಿಗೆ ಬರಲೇ ಇಲ್ಲ. ಈ ಕೈಶಿಕನ ಉಪಚಾರದಿಂದ ಸ್ವರ್ಗಸಮಾನ ಸುಖಿಯಾದೆನೆಂದು ಉರಿಯಂತೆ ಚುಚ್ಚಿನ ಮಾತಾಡಿದನು.

ಆಗ ಭೀಷ್ಮಕನು ಅದಕ್ಕೆ ಮರುನುಡಿಯೆಂಬ ನೀರೆರೆಚಿದನು. ಮಾನವನಾದ ನನ್ನ ಪ್ರಮಾದವನ್ನು ಕ್ಷಮಿಸು. ನಿನ್ನ ಮಾತು ಹೀಗಿರಲು ನಿನ್ನಾ ನೋಟವೂ ಕೆಲಸವೂ ಸಾಂಗವಾಗಲಿ. ನಿನ್ನ ಬಳಿಗೈದಿದರೂ, ನನ್ನ ಮನದ ಬೆದರಿಕೆಯಾರದು. ಸ್ವಯಂವರವೆಂದು, ಕೈಯಾರೆ ಬರೆಯುವುದಿಲ್ಲ. ಅನುಗ್ರಹಿಸು, ಶಾಂತನಾಗು.

ಶ್ರೀಕೃಷ್ಣನು ಮತ್ತೆ ಹೇಳಿದನು: ರಾಜನ್, ಹೆಚ್ಚೇನು? ಕನ್ಯೆಯನ್ನು ಕೊಡೆಂದೋ, ಬೇಡವೆಂದೋ ನಾನು ಹೇಳಲಾರೆ. ಆದರೆ ನನ್ನ ರುಕ್ಮಿಣಿಯ ಸಂಬಂಧಕ್ಕೆ ಕಾರಣವಿದೆ. ಹಿಂದೆ ಮೇರುವಿನಲ್ಲಾದ ಒಪ್ಪಂದದಂತೆ ಶ್ರೀದೇವಿಯೇ ರುಕ್ಮಿಣಿಯಾದಳು. ಅವಳಿಗೆ ಸ್ವಯಂವರವು ತಕ್ಕುದಲ್ಲ. ನಾನೀ ಕುತೂಹಲ ನೋಡಬಂದೆ. 'ತಗ್ಗಿದರೆ ಫಲಹೆಚ್ಚು' ಎಂಬರು! ನಾವೇಕೆ ಈಗ ದುಡುಕುವೆವು? ನಾನು ಪಡೆಯೊಡನೆ ಬಂದುದಕ್ಕೆ ಮನ್ನಿಸು. ಆದರೆ, ಕದನಕ್ಕೆ ಈ ಸಹಾಯವೇನೂ ಬೇಡ. ನೀನು ತಂದೆಯಂತೆ ಪೂಜ್ಯನು, ನಮ್ಮಲ್ಲಿ ಮಮತೆಯಿರಿಸು, ನಾನೂ ಪೂಜ್ಯರಲ್ಲಿ ಪುತ್ರನಂತೆ ವಿನೀತನೆಂದು ತಿಳಿ. ಇನ್ನು ಕಲುಷವು ಅಶುದ್ಧರಿಗೆ ಹೊರತು, ಶುದ್ಧರಿಗೆಲ್ಲಿ? ನಿಮಗೊಳ್ಳಿತಾಗಲಿ. ನಾನೀಗ ತೆರಳುವೆನೆನ್ನುತ್ತಾ ಹೊರಡಲನುವಾದನು.

ಅರಸರೆಲ್ಲ ಅಚ್ಚರಿಯಾಗಿ ನೋಡುತ್ತಿದ್ದರು. ಭೀಷ್ಮಕನು ತ್ರಿಕರಣಪೂರ್ವಕ ಹೊಗಳಿ, ರಾಜಸನ್ಮಾನನೀಯ ಕಾಣಿಕೆಯಿತ್ತರು. ಆಗಾ ಕೃಷ್ಣನು ಹಿಂಬಾಲಿಗರನ್ನು ಬೀಳ್ಕೊಟ್ಟು, ಪಡೆಯೊಡನೆ ಮಥುರೆಗೆ ನಡೆದನು. (೧೧೧. ಅಧ್ಯಾಯ. ಶ್ಲೋಕ ೭೨.)

ಇತ್ತ ನೆರೆದ ಅರಸರೆಲ್ಲಾ ಹೊರಡಲು ಸಜ್ಜುಗೊಳಿಸಲು, ತಕ್ಕಂತೆ ಸತ್ಕರಿಸಿ, ಬೀಳ್ಕೊಟ್ಟನು. ಅವರಲ್ಲಿ ಕೆಲವರು ತೆಂಕಣವರು ಭೀಷ್ಮಕನೊಡನೆ ಗುಟ್ಟು ಮಾತಾಡಲು ನಿಂತರು. ಅವರಲ್ಲಿ ಗೆಳೆತನದಿಂದಲೂ, ಧರ್ಮಾದಿತ್ರಿವರ್ಗವೂ; ಕಥಾನುಕಥನ, ಒಳ್ಳಿತ್ತು, ಮಧುರತೆ, ಸುಕುಮಾರತೆ, ಸ್ಪಷ್ಟತೆ, ಓಜಸ್ಸುಗಳೆಂಬ ಆರುಗುಣದಿಂದ ಕೂಡಿದುದು; ರಾಜನೀತಿಗೆ ತಕ್ಕುದೂ ಆದ ಮಾತನ್ನು ಭೀಷ್ಮಕನು ಹೇಳಿದನು—ನೀವೆಲ್ಲಾ ಸಮ್ಮತಿಸಿದಂತೆ ಈ ವಿಜೃಂಭಣೆ ನಡೆಸಿದೆನು, ಈ ನನ್ನ ತಪ್ಪನ್ನು ಮನ್ನಿಸಿರಿ—ಎಂದು! (ಮಗನನ್ನು ಕುರಿತು) ಹೇಳತೊಡಗಿದನು: ಈ ಮಗನ ಚೇಷ್ಟೆ ನೋಡಿ ಬಲು ಬೆದರಿದೆನು. ಆ ಕೃಷ್ಣನೊಬ್ಬನೇ ಮಹಾತ್ಮನು, ಮಿಕ್ಕವರೆಲ್ಲಾ ಬಾಲಿಶರಾದವರೆಂದೂ ತಿಳಿವೆನು, ಅವನನ್ನು ಹೆತ್ತ ತಾಯಿ ಧನ್ಯಳು—ಎಂದು ಮುಂತಾಗಿ ಆಲಾಪಿಸಿದನು.

ಆಗ ಬಿಡುನುಡಿಗಳಿಂದ ಸಾಲ್ವನೆಂದನು: ರಾಜಶ್ರೇಷ್ಠನೇ, ನಿನ್ನ ಮಗನಿಗಾಗಿ ವ್ಯಥಿಸಬೇಡ, ಕ್ಷತ್ರಿಯನಿಗೆ ಯುದ್ಧದಲ್ಲಿ ಸೋಲುಗೆಲುವುಗಳು ನೈಜ. ಆ ರಾಮಕೃಷ್ಣರ ಹೊರತು, ನಿನ್ನ ಮಗನೊಂದಿಗೆ ಸೆಣಸಲು ಆದಾರು ತೀರುವನು? ಇವನ ಭಾರ್ಗವಾಸ್ತ್ರವೊಂದೇ ತಡೆಯಲಾರದುದು! ಕೃಷ್ಣನ ಮಹತ್ವವರಿತೇ, ಅವನಲ್ಲಿ ಸೆಣಸನು. ಅವನನ್ನು ಸೇವಿಸುವವನೊಬ್ಬನಿದ್ದಾನೆ. ಮುನಿವರ್ಯನಾದ ಗಾರ್ಗ್ಯನು ಯಾದವರಲ್ಲಿ ಸಂತಾಪದಿಂದ ಸಾಗಿ, ಹನ್ನೆರಡು ವರುಷ ಕಬ್ಬಿಣಮೆದ್ದು, ಮಥುರೆಯವರಿಗೆ ಸೋಲದ ಮಗನನ್ನು ರುದ್ರನಿಂದ ಪಡೆದನು. ಆ ಕಾಲಯವನನಿಗೆ ದೂತರನ್ನು ಕಳುಹುವ.

ಈ ಮಾತಿಗೆ ಅವರೆಲ್ಲರೂ ಸಮ್ಮತಿಸಿದರೂ, ಜರಾಸಂಧನು ಮಾತ್ರ ಬ್ರಹ್ಮನ ಮಾತು ನೆನೆದು (?). ಹಿಮ್ಮೊಗನಾಗಿ ತನ್ನಲ್ಲಿ ತಾನೇ, ನುಡಿದನು—ಈ ಮೊದಲು ಇವರೆಲ್ಲಾ ಬಲಿಷ್ಠನಾದ ನನ್ನನ್ನು ನಂಬಿ, ತಮ್ಮ ಅಸ್ತಿತ್ವ, ಹೆಗ್ಗಳಿಕೆಯನ್ನು ಗಳಿಸಿದರು. ಈಗ— ಕನ್ಯೆಯು ಗಂಡನಲ್ಲಿ ಸಿಟ್ಟಿನಿಂದ ಇನ್ನೊಬ್ಬನನ್ನೆಂಬಂತೆ–ಬೇರೆಯವನನ್ನು ಬಯಸುವರು, ಅದೂ ಕೃಷ್ಣನಿಗಾಗಿ! ಇದೇ ವಿಧಿಶಾಸನವು (ಗಟ್ಟಿಯಾಗಿ) ಇದು ನನಗೆ ಗಂಡಾಂತರದ ಹೊತ್ತು, ನನಗೆ ಮರಣವೇ ಲೇಸು, ಪರಾಶ್ರಯವಲ್ಲ, ರಾಜರಿರಾ! ಅದಾವ ಕೊಲೆಗಾರನನ್ನೂ ಇದಿರಿಸುವೆನು, ಪರಾಶ್ರಯವೆಂದೂ ಮಾಡೆನು. ಇದೀಗ, ನಿಮಗಾಗಿ ಕಾಲಯವನನಡೆಗೆ ಬಳಿಯಟ್ಟುವಾ! ಆ ದೂತನಿಗೆ ಕೃಷ್ಣನಿಂದ ತಕ್ಕ ಕಾಪಿಟ್ಟು ಕಳುಹಿರಿ. ಅದಕ್ಕೆ ಸಾಲ್ವನೇ ತಕ್ಕವನು!

ಆಮೇಲೆ ಸಾಲ್ವನತ್ತ ತಿರುಗಿ—ಈ ಅರಸರಿಗೆ ತುಸ ನೆರವಾಗು–ಎಂದನು. ಅವರೆಲ್ಲಾ ನಿಶ್ಚೈಸಿ, ಅವರೆಲ್ಲಾ ತಂತಮ್ಮ ರಾಜ್ಯಕ್ಕೆ ಹೋದರು.

ಭೀಷ್ಮಕನೂ ರುಕ್ಮಿಯೂ ಸೊಟ್ಟಮೋರೆ ಮಾಡಿಕೊಂಡು ಒಳಸೇರಿದರು. ರುಕ್ಮಿಣಿಯು ಹೀಗೆಲ್ಲಾ ನಡೆದ ಸುದ್ದಿಕೇಳಿ-ತಾನು ಕೃಷ್ಣನನ್ನು ಹೊರತು ಬೇರೆಯವರ ಹೆಂಡತಿಯಾಗೆನೆಂದು-ನಾಚುಗೆಯಿಂದಲೇ ನುಡಿದಳು! (೧೧೧ ಅಧ್ಯಾಯ. ಶ್ಲೋಕ ೫೨)

ಕೆಲವು ದಿನದಲ್ಲಿ ಒಂದೆಡೆ ಕಾಲಯವನನೂ, ಇನ್ನೊಂದೆಡೆ ಜರಾಸಂಧನೂ ಮಥುರೆಯನ್ನು ಮುತ್ತಿದರು. ಆಗ ಕೃಷ್ಣನು ಅಲ್ಲಿಂದೊಬ್ಬನೇ ಹೊರಗೆ ಓಡಿ, ಬೆನ್ನಟ್ಟಿ ಬಂದಾ ಕಾಲಯವನನನ್ನು ಮುಚುಕುಂದನಿಂದ ಸುಡಿಸಿದನು, ಜರಾಸಂಧನು ಸೋತು ಹಿಂಜರಿದನು. ಮತ್ತೆ, ದ್ವಾರಕೆಯ ನಿರ್ಮಾಣವಾಯ್ತೆಂದೂ, ಅಲ್ಲಿ ಬಲರಾಮನು ರೇವತಿಯನ್ನು ಮದುವೆಯಾದನೆಂದೂ ಕತೆಯು ಆರು (೧೧೨-೭) ಅಧ್ಯಾಯಗಳಲ್ಲಿ ವಿಸ್ತೃತವಾಗಿದೆ. ಆ ಮೇಲಣ-ಪ್ರಸ್ತುತ-ಕತೆಯತ್ತ ಈಗ ಸಾಗುವಾ.

**ಪುನರಾಹರಣ—** ವಾರ್ತಾಸಂಗ್ರಹಕ್ಕಾಗಿ ನೇಮಿಸಿದ್ದ ದೂತರು ಕೃಷ್ಣಸಭೆಗೆ ಬಂದರು—ಭೋಜರಾಜನ ಆಣತಿಯಂತೆ, ಅಲ್ಲಿಗೆ ತೆಂಕಣವರೆಲ್ಲಾ ಧಾವಿಸುತ್ತಿದ್ದಾರೆ. ಅಲ್ಲಲ್ಲಿ ಪ್ರಸಿದ್ಧವಾಗಿ ತಿಳಿದುದೆಂದರೆ, ಇಂದಿನಿಂದ ಮೂರನೆಯ ಹಗಲಲ್ಲಿ ರುಕ್ಮಿಣಿಯ ಸ್ವಯವಂವರವಾಗುವುದು-ಎಂದರು. ಇದನ್ನು ಕೇಳಿದ ಕೃಷ್ಣನು ಆಲೋಚಿಸಿ ಪಡೆಯೊಡನೆ ಕುಂಡಿನಕ್ಕೆ ನಡೆದನು; ರುಕ್ಮಿಣಿಯು ರೂಪವತಿ, ಕೃಷ್ಣನ ಗುಣಗಾನವನ್ನು ಕೇಳಿ ಮನವಾರೆ ಮೆಚ್ಚಿದ್ದಳು, ಕೃಷ್ಣನೂ ಹಾಗೇ ರುಕ್ಮಿಣಿಯನ್ನು ಬಯಸಿದ್ದನು! ಮದುವೆಗೆ ಕೇಳಿದ್ದರೂ, 'ಯಾದವರು ಕಂಸನ ಕೈಯಾಳುಗಳೆಂ'ದು ರುಕ್ಮಿಯು ಕೊಡಲೊಪ್ಪನು. ಮತ್ತೆಯಾದರೋ, ಕಂಸನ ಮರಣದಿಂದ ಆ ಸಿಟ್ಟು ಉರಿದುದು! ಅದೇ ತೆರದಲ್ಲಿ ಕನ್ಯಾವರಣದನಕ ಬಳೆಯಿತು! ಮೊದಲಿನಂತೆ, ಭೀಷ್ಮಕನೂ ಇದಕ್ಕೆ ಒಪ್ಪಿದ್ದನು.

ಅತ್ತ ಕ್ರಥಕೈಶಿಕರು ರಾಮಕೃಷ್ಣರನ್ನು ಬರಮಾಡಿ, ಹೊರಗೆ ಕೂಡಿಸಿದರು. ಮದುವೆಯ ಮುಂಚಿನಂದು ಕಟ್ಟಳೆಯಂತೆ, ರುಕ್ಮಿಣಿಯು ದೇವೇಂದ್ರನ ಗುಡಿಯ ನೋಟಕ್ಕಾಗಿ ನಾಲ್ಕುದುರೆಯ ತೇರಲ್ಲಿ ಬಂದು, ಇಂದ್ರಾಣಿಯನ್ನು ಅರ್ಚಿಸಿ, ಹಿಂದೆ ಹೊರಟಳು. ಆಗ ಕೃಷ್ಣನು ಅವಳನ್ನು ತನ್ನ ತೇರಲ್ಲಿರಿಸಿ, ದ್ವಾರಕೆಯತ್ತ ಸಾಗಿದನು. ಬಲರಾಮಾದಿಗಳು ಅವಳ ಕಾಪಿನವರನ್ನು ತಡೆದರು, ಜರಾಸಂಧಾದಿಗಳನ್ನೂ ತಡೆದರು. (೧೧೮ ಅಧ್ಯಾಯ, ಶ್ಲೋಕ ೧೦೬.) ಅತ್ತ ರುಕ್ಮಿಯು, 'ತನ್ನ ತಂಗಿಯನ್ನು ಕೃಷ್ಣನು ಕದ್ದೊಯ್ಯುವನೆಂದ'ದು ಕೇಳಿ, ತಂದೆಯೆದುರೀ ಪ್ರತಿಜ್ಞೆ ಮಾಡಿದನು—ಕೃಷ್ಣನನ್ನು ಕೊಲ್ಲದೆ, ರುಕ್ಮಿಣಿಯನ್ನು ಹಿಂದೆ ಕರೆತಾರದೆ, ಕುಂಡಿನಕ್ಕೆ ಬಾರೆನೆಂದನು. ಮತ್ತೆ, ದಾಕ್ಷಿಣಾತ್ಯರ ಹಾಗೂ ಪಡೆಯೊಡಗೂಡಿ, ನರ್ಮದಾ ಬಳಿಯಲ್ಲಿ ಕೃಷ್ಣನನ್ನು ತಡೆದನು. ಅವರಿಬ್ಬರೇ ಕಾದಿದರು. ಆಗ ಅರಸರೆಲ್ಲಾ ಮುತ್ತಲು, ಅವರನ್ನು ದಿಕ್ಕುಪಾಲು ಓಡಿಸಿದನು. ಕೊನೆಗೆ ರುಕ್ಮಿಯು ಮೂರ್ಛೆಹೋದನು. ಆಗ ರುಕ್ಮಿಣಿಯು ಅಣ್ಣನಲ್ಲಿಯ ಮಮತೆಯಿಂದ ಅವನನ್ನು ಕಾಪಾಡಲು, ಗಂಡನ ಕಾಲು ಹಿಡಿದು ಬೇಡಿದಳು. ಆದರಿಂದ ಕೃಷ್ಣನು ಅವನನ್ನು ಕೊಲ್ಲದೆ, ಜೀವನ್ಮೃತಾವಸ್ಥೆಯಾಗಿಸಿ—ಗಡ್ಡ ತಲೆ ಬೋಳಿಸಿ ಬಟ್ಟೆ ಗಂಟಿಕ್ಕಿ—ಬಿಟ್ಟನು.

ಆತನಕ ಯಾದವಪಡೆಯು ದೂರವಿತ್ತು. ಆಗಲೇ ಬಂದ ಬಲರಾಮನು ಆತೆರದ ರುಕ್ಮಿಯ ಗಂಟು ಬಿಡಿಸಿ, 'ಬಂಧುಗಳಿಗೆ ಇಂತಹ ರೀತಿ ಮಾಡಲಾಗ'ದೆಂದು ಕನಿಕರದಿಂದ ಹೇಳಿದನು. ಮತ್ತೆ, ರುಕ್ಮಿಯು ವಿದರ್ಭದ ಇನ್ನೊಂದೆಡೆಯಲ್ಲಿ ವಾಸಕ್ಕಾಗಿ ಪಟ್ಟಣ (ಭೋಜಕಟಕ)ವನ್ನು ರಚಿಸಿದನು.

ಕೃಷ್ಣನು ದ್ವಾರಕೆಗೆ ತಲಪಿ, ರುಕ್ಮಿಣಿಯನ್ನು ಮದುವೆಯಾದನು. ಅವರಿಬ್ಬರೂ ಪರಸ್ಪರ ಪ್ರೀತಿಯಿಂದಿದ್ದರು. ಇನ್ನು ೭ ಮಂದಿ ಹಾಗೂ ೧೬ ಸಾವಿರ ಹೆಂಗಳನ್ನೂ ಪರಿಗ್ರಹಿಸಿದನು. (ಅಧ್ಯಾಯ ೧೧೯, ಶ್ಲೋಕ ೫೨)

**(೨) ಭಾಗವತದಲ್ಲಿ—** (ನಿರ್ಣಯಸಾಗರದ ಪ್ರತಿ. ಸ್ಕಂಧ ೧೦, ಅಧ್ಯಾಯ ೫೨)—ಈ ಮೇಲೆ ಬರೆದ ಕತೆಗಿಂತ ಭೇದಾಂಶವಿದು: ಒಮ್ಮೆಯೇ ಈ ಸ್ವಯಂವರವಾಗುವುದು, ಅದರ ಮುಂಚಿನ ದಿನ ಬ್ರಾಹ್ಮಣನೊಬ್ಬನು ದ್ವಾರಕೆಗೆ ರುಕ್ಮಿಣಿಯ ಸಂದೇಶ ಕೊಂಡು ಹೋಗುವನು. 'ವಿವಾಹದ ಹಿಂದಲ ದಿನ ಗೌರೀಪೂಜೆಗೆ ಹೋಗುವ ಕ್ರಮವಿದೆ'ಯೆಂದು ಬರೆದಿದ್ದಳು. ಅದಕ್ಕಾಗಿ, ಕೃಷ್ಣನು 'ರುಕ್ಮಿಯು ತನ್ನಲ್ಲಿ ಹಗೆಯಿಂದ ತನಗಾಗುವ ಆ ಮದುವೆ ತಡೆದ'ನೆಂದು ಸಿಟ್ಟಾಗಿ ಕುಂಡಿನಕ್ಕೆ ಹೊರಟೇಹೋದನು. ಅದನ್ನರಿತು, ಬಲರಾಮನು ಪಡೆಯೊಡನೆ ನಡೆದನು. ಇವರಿಗೆ ಭೀಷ್ಮಕನೇ ಬಿಡಾರಗೊಳಿಸಿದನು.

ಅತ್ತ ರುಕ್ಮಿಣಿಯೂ 'ತ್ರಿಯಾಮ (ರಾತ್ರಿ) ಯೊಂದರ ಅವಧಿ'ಯಿದೆ, ಕೃಷ್ಣನಿನ್ನೂ ಬಂದಿಲ್ಲವೆಂದು

ಚಿಂತಿಸುವಾಗ; ಆ ಬ್ರಾಹ್ಮಣನು ಬಂದು, ಕೃಷ್ಣಾಗಮನ ವಾರ್ತೆಯನ್ನು ತಿಳುಹಿದನು. ದೇವಳಕ್ಕೈದಿ, ಬರುವಾಗಲೇ ಕೃಷ್ಣನ ಸಂಗತಿಯಿದೆ. ಕೊನೆಗೆ, ಪಡೆಯೆಲ್ಲಾ ಸೋತ ಮೇಲೆಯೂ, ರುಕ್ಮಿಯೊಬ್ಬನೇ ಕಾದಿದ್ದನು.

**(೩) ಕನ್ನಡ ಭಾಗವತದಿಂದ—** 'ರುಕ್ಮಿಣಿಯು ಹರ-ಗೌರಿ ಇಂದ್ರ-ಶಚಿಯರನ್ನು ಸಂದರ್ಶಿಸಿದಳೆಂ'ದು ತಿಳಿಯುತ್ತೆ.

**(೪) ವಿಷ್ಣು ಪುರಾಣದ—**ಕತೆಯಿದು: ವಿವಾಹದ ಹಿಂದಿನಂದೇ ಅವಳನ್ನು ಕದ್ದೊಯ್ದನು, ಇತ್ಯಾದಿ ಮೇಲೆ ಬರೆದಂತೆಯೇ ಇದೆ.

**ಇಲ್ಲಿನ ಸಾರಾಸಾರಗಳು—** ಈ ಕಥಾಪ್ರಪಂಚದಲ್ಲಿ ಮೊದಲನೆಯದನ್ನುಳಿದು, ಮಿಕ್ಕವಕ್ಕೆ ಬಹಳೇ 'ಬೇರಿತನ'ವಿಲ್ಲ. 'ಹರಿವಂಶ'ದ ಕತೆಯು ಇಮ್ಮಡಿಯ ಕಲ್ಯಾಣವನ್ನು ಬಣ್ಣಿಸುತ್ತದೆ. ಮೊದಲ ಬಾರಿಯದು 'ಸ್ವಯಂವರ'ವೆಂದೇ ಪ್ರಚಾರವಿತ್ತೆಂದು ಭೀಷ್ಮಕನ ಮಾತಿಂದಲೂ ತಿಳಿವುದು. ಆಗ ಕೃಷ್ಣನು ಬರಲಿಕ್ಕಿಲ್ಲ, 'ರಾಜ್ಯಾಧಿಪತ್ಯವಿಲ್ಲದವನಿಗೆ ಅಂತಹ ಸಭೆಗೆ ಪ್ರವೇಶವಿಲ್ಲೆಂ'ದು ಕ್ರಮವಿದೆಯೆಂದು, ಆ ರಾಜರೆಲ್ಲಾ ನಿರ್ಧರಿಸಿದ್ದರು. ಆದರೆ, ಅತ್ತ ಕೃಷ್ಣನಿಗೆ ರಾಜ್ಯಾಭಿಷೇಕದ ಸುದ್ದಿಯಿಂದಾಗಿ, ಈ ಸಮ್ಮೇಳನದ ಕಟ್ಟುವೊಡೆಯಿತು. ಅದಕ್ಕಾಗಿಯೇ, ಎರಡನೆಯ ಸಲ 'ಕನ್ಯಾವರಣ (ಮದುವೆ)'ವೆಂದೇ ನಿಶ್ಚಯಿಸಿದುದು. ಇದಕ್ಕೆ ಕೃಷ್ಣನನ್ನು ಆಮಂತ್ರಿಸಿಲ್ಲ, 'ಆಮಂತ್ರಣವಿಲ್ಲದವನು ಬರುವುದೆಂತು?'. ಅದು ಕಾರಣವೇ ಕೃಷ್ಣ-ರಾಜರು ಅನ್ಯೋನ್ಯವಾಗಿ ಉಪೇಕ್ಷೆಯಿಂದಲೇ ಇದ್ದರು. ಆ ಮತ್ತಿನ ಕಲ್ಯಾಣವು ನೆರವೇರುವಂತೆ ಎಲ್ಲವೂ ಬಗೆದಿತ್ತು (ರುಕ್ಮಿಣಿಯು ದೇವಳಕ್ಕೆ ಹೋಗಿ ಬರುತ್ತಿದ್ದಳು.) ಆ ಮೊದಲಲ್ಲಿ 'ಸ್ವಯಂವರವು ತಡೆಯಾದು'ದರಿಂದ ಹುರಿಗೊಂಡು ಈ ಕಾರ್ಯಸಾಧನೆಯೆನ್ನಬಹುದು.

ಇನ್ನು, ಮೊದಲ ಸರ್ತಿ ಕೃಷ್ಣನು ಎರಡು ಮೂರು ದಿನಕ್ಕೆ ಮುಂಚಿತವಾಗಿ ಬಂದುದರಿಂದ; ಆ ತೆರದ ರಾಜ್ಯಾಭಿಷೇಕ, ಅದರಿಂದಾಗಿ ರಾಜರೆಲ್ಲಾ ಚೆದರಲೂ ಅವಕಾಶವಾಯ್ತು. ಅದೇ ಹಗೆ ಬಳೆದು, 'ಕಾಲನೇಮಿ ಕಾಳಗ'ಕ್ಕೆ ಮೂಲವಾಯ್ತೆಂದುದು ಇನ್ನೊಂದು ಉದ್ದೇಶವೆನ್ನಬಹುದು. ಜರಾಸಂಧನು ಹಲವುಬಾರಿ ಸೋತಾಗ, ಒಮ್ಮೆ ಅದೇ ಕಾರಣಕ್ಕೆ ಬೆಂಬಲವಾಗಿ ಕಾಲನೇಮಿ ಬಂದುದೆಂದು ಭಾಗವತದ ಕತೆಗಿಂತ 'ಅಭಿಮಾನಧನನೂ ಚಲಗಾರನೂ' ಆದ ಜರಾಸಂಧನ ಮತ್ತಿನ ಮಾತಿನಂತೆ 'ಈ ಅತ್ಯವಸರದಲ್ಲಿ ಬೇಕಾಗಿ ಕಾಲನೇಮಿಯನ್ನು ಅಪೇಕ್ಷಿಸಿದರೆಂ'ಬುದೇ ಕಳೆಯೇರಿದೆ. ಅದರೊಂದಿಗೆ 'ದ್ವಾರಕಾ ನಿರ್ಮಾಣಕ್ಕೆ ಮೊದಲಾಗಿ ಆ ಸ್ಥಳವರಿಯಲು' ಗರುಡನು ಹೋದುದು ಚೆನ್ನಾಗಿ ಸೊಬಗುವಡೆದಿದೆಯೆನ್ನಬಹುದು. ಆ ನಿರ್ಮಾಣ ವಿಷಯದಲ್ಲಿ ಇಲ್ಲಿನ ವರ್ಣನೆಯು ಅಗತ್ಯವಾಗಿ ಓದತಕ್ಕುದೆಂದು ತೋರದಿರದು (ಸ್ಥಳಸಂಕೋಚದ ಭಯದಿಂದ ಇಲ್ಲಿ ಬರೆದಿಲ್ಲ, ಅವಕಾಶವಾದರೆ ಇನ್ನೊಮ್ಮೆ ಬರೆವೆವು).

ಕೃಷ್ಣನು ಮತ್ತಿನ ಬಾರಿ ಬಂದುದು ಆ ರಾಜರಿಗೆಲ್ಲಾ ತಿಳಿದಂತೆ ವರ್ಣಿಸಿಲ್ಲದುದು—ಅಂತಹ ತೊಡರು ಬರುವ ಕಾರಣವೇ ಇಲ್ಲೆಂಬ ಉಪೇಕ್ಷೆಯ ತೆರವೆಂದೇ ತಿಳಿಯಬಹುದು.

ಆ ಸ್ವಯಂವರವು, ಹೀಗೆರಡು ಬಾರಿಯಾಗಿಯೇ ನಡೆದಿರಬಹುದೆಂದು ಹೇಳುವುದೇ ಚೆನ್ನೆಂದು ತೋರುವುದು—ಶಿಶುಪಾಲನಿಗೆ ತನ್ನನ್ನು ಕೊಡುವ ನಿಶ್ಚಿತವು ತನಗೊಪ್ಪಿತವಲ್ಲೆಂದೂ, ಆ ಮೊದಲು ಕಟ್ಟಳೆಯಂತೆ ದೇವಾಲಯ ದರ್ಶನಕ್ಕೆ ಹೋಗುವುದನ್ನೂ ಭಾಗವತದಲ್ಲಿ ವರ್ಣಿಸಿದೆ. ಅದು ನಿಶ್ಚಿತವರನ ಪಾಣಿಗ್ರಹಣವಷ್ಟೆ! ಅಂದರೆ, 'ರುಕ್ಮಿಣಿಯ ಸ್ವಯಂವರ'ವೆಂಬ ಲೋಕಪ್ರಸಿದ್ಧ ಕತೆಯಲ್ಲ, ಸೊಗಸೂ ಅಲ್ಲ. ಅಂತೆ, ರುಕ್ಮಿಣಿಯು ದೇವಾಂಶಳು. ಕೃಷ್ಣನಿಗೆ ಸಲ್ಲತಕ್ಕವಳೆ' ಎಂಬ ತಿಳಿವಿಕೆಗೂ ಅವಕಾಶವಾಗುವುದಕ್ಕಾಗಿ, 'ಹರಿವಂಶ'ದಲ್ಲಿ "ಸ್ವಯಂವರ, ಕಲ್ಯಾಣ"ಗಳೆರಡೂ ಬಣ್ಣಿಸಿವೆಯೆನ್ನಬಹುದು. ಬರಿಯ "ಕಲ್ಯಾಣವೆಂಬಾಗ ಅಪಹಾರ"ವೆಂಬ ವಿಧಿನಿಯಮೋಲ್ಲಂಘನಕ್ಕೆ ಅವಶ್ಯ ಕಾರಣವಾಗಿ ಆ ಮೊದಲ ಬಾರಿಯ ಕಲ್ಪನೆಯೆಂದು ತಿಳಿವುದೂ ತಪ್ಪೆನಿಸುವುದಿಲ್ಲ!

ಇನ್ನು, 'ಭಾಗವತ'ದಲ್ಲಿನ 'ಬ್ರಾಹ್ಮಣ ದೌತ್ಯ'ವು 'ಹರಿವಂಶ'ದಲ್ಲಿಲ್ಲ. ಆದರೆ, ೧೧೧ನೆಯ ಅಧ್ಯಾಯದ ಕೊನೆಗೆ 'ರುಕ್ಮಿಣಿಯ ನಿರ್ಧಾರ'ವೊಂದು ಹೇಳಿದೆ. ಅದುವೇ ಕೃತಿರೂಪಕ್ಕಿಳಿದು, ತನ್ನ ವಿವಾಹವು ಕೃಷ್ಣನಿಗೆ ಒಮ್ಮೆಯಾದರೂ ತಿಳಿದಿರಲಿಕ್ಕಾಗಿ ಬ್ರಾಹ್ಮಣನನ್ನು ಕಳುಹಿದುದೆನ್ನಬಹುದು. 'ಹರಿವಂಶ'ದಲ್ಲಾದರೋ ದೂತರೇ ಎರಡು ಬಾರಿ ಸುದ್ದಿಗೊಡುವರು. ಆ 'ಕಲ್ಯಾಣ'ವು ಮೊದಲಬಾರಿ ತಡೆದುದರಿಂದ, ಕೃಷ್ಣನು ಅದಕ್ಕಾಗಿ ಎಚ್ಚರದಲ್ಲಿದ್ದನೆಂದು ಅರ್ಥವಿಸಲೆಡೆಯಿದೆ.

ಪರಂತು, ಆ ಬ್ರಾಹ್ಮಣದೌತ್ಯದಿಂದ ರುಕ್ಮಿಣಿ ಕೃಷ್ಣರೊಳಗಿನ ಪ್ರೇಮಾಧಿಕ್ಯವು ಉದಾತ್ತವಾಗಿ ಚಿತ್ರಿತವಾಗಿರುವುದು. ಆದುದರಿಂದ ಇದನ್ನು ಹರಿವಂಶದ ೧೧೧ನೇ ಅಧ್ಯಾಯದ ಕೊನೆಗೋ, ೧೧೮ನೇ ಅಧ್ಯಾಯದಲ್ಲಿಯೋ ಸಂಗತಿಸಬಹುದು (ಈ ರೀತಿಯಲ್ಲಿ ಬೇರೆಯವನ್ನು ಸಂಗತಿಸಿ ಹೇಳಿದುದನ್ನು ಶ್ರೀ ಔಡ್ಲಮನೆ ಆತ್ಮಾರಾಮ ಶಾಸ್ತ್ರಿಗಳು ಬರೆದ ಶ್ರೀ ಕೃಷ್ಣಚರಿತಾಮೃತದಲ್ಲಿ ವಾಚಕರು ಓದಿರಬಹುದು). ವಿಷ್ಣುಪುರಾಣದ ಕತೆಯು ಚಿಕ್ಕದು, ಭಾಗವತದಲ್ಲಿ ತುಸ ದೊಡ್ಡದಾಗಿದೆ; ಹರಿವಂಶದಲ್ಲಿಯಾದರೋ ಅದರೊಂದಿಗೆ ಹೊಸನೋಟವೊಂದನ್ನು ಹರಿಯಿಸಿದೆ! ಈ 'ರುಕ್ಮಿಣಿಯ ಪುನರಾಹರಣ'ದಲ್ಲಿ ಕೃಷ್ಣನ ನ್ಯಾಯ ಗೆಲ್ಲಗಳು ಇತರ ಗ್ರಂಥಗಳಿಗಿಂತ ಹೆಚ್ಚಾಗಿ ವ್ಯಕ್ತವಾಗುತ್ತವೆಯೆಂದು ತೋರುವುದಿಲ್ಲವೇ? ಅದರಿಂದ ಇತರ ಗ್ರಂಥಗಳ ಕತೆಯು ಸರಿಯಲ್ಲವೆಂದು ನಮ್ಮ ಆಶಯವಲ್ಲೆಂದು ಇನ್ನೊಮ್ಮೆ ವಿನಂತಿಸುವೆವು.*

* ಈ ಹರಿವಂಶದ ಕೆಲವು ಕತೆಗಳನ್ನು 'ಶರಣ ಸಾಹಿತ್ಯ'ದಲ್ಲಿ ಕಾಣಬಹುದು.

---

# ಬರಲಿರುವೆ ಕಾಯು!

ಲೇ—"ಶರ್ವಾ"

ತಾಯಿ ನಿನ್ನ ಮಡಿಲಿಗೊಮ್ಮೆ ಬರಲಿರುವೆ ಕಾಯು?
ಆ ಸುದಿನವ ನೇಯು!

ಇಲ್ಲಿ ನಾನು ಮನೆಯ ಮುಂದೆ ಆಡುತಿರುವೆ ತಾಯಿ
ಬಯಲ ಬಣ್ಣ ಗಿರಿಯ ಕಣ್ಣ ನೋಡುತಿರುವೆ ಛಾಯಿ!
ನಾನು ನಲಿಯುತಿರುವೆನು.

ನಿನ್ನ ಎದೆಯ ಅಮೃತವುಂಡ
ಸ್ಫೂರ್ತಿ ಬತ್ತುವನಕವೂ
ಆಡಿ ಆಡಿ ದಣಿಯುವೆ!
ಮತ್ತೆ ನಿನ್ನ ಕರೆಯುವೆ!

ಮರೆತೆನೆಂದು ಬಂದು ನನ್ನ ಕೆಣಕಬೇಡ ಬೇಡುವೆ.
ಕೋಪ ಗೊಂಡು ಕೆಳಗೆ ನೂಕಿ ಹಾಕಬೇಡ ಅಡುವೆ.
ಮರೆಯ ಬೇಡ ನನ್ನನು!

ನನ್ನ ಆಟ ಸುಗಮವಿರಲು
ಕುಣಿಯೆ ಶಕ್ತಿ ಮೈಯಲಿರಲು
ಹೃದಯದಲ್ಲಿ ತವಕವಿರಲು
ನಿನ್ನ ನಾನು ಮರೆಯುವೆ!
ಬಳಿಕ ನಿನ್ನ ಸೇರುವೆ.

ನಿನ್ನ ಪ್ರೀತಿ ಮಿಗಿಲು! ಇಲ್ಲಿ ನಲ್ಮೆಯೆಲ್ಲಿದೆ?
ನೀನು ಕೊಡುವ ಮಾನವಿಲ್ಲಿ ಕಾಣಲೆಲ್ಲಿದೆ?

ನಾನು ಈಗ ಉಳಿಯುವೆ—
ದ್ವೇಷ ಪ್ರೀತಿಯೆಲ್ಲವನ್ನು
ಇಲ್ಲಿಯದನೆ ನೋಡುವೆ.
ನಿನ್ನ ದಳಿಯಲಾರದು.
ಇಲ್ಲಿ ಬದುಕಿ ಬಾಳದು.

ನೀನು ನಿತ್ಯ ನೋಡುತಿರು
ದಿಟ್ಟಿಯಿತ್ತ ತಿರುಗುತಿರು!
ಎತ್ತ ಬಾ! ಎತ್ತ ಬಾ!
ಬಿದ್ದರಾನು ಎತ್ತ ಬಾ!
ನೊಂದರಾನು ತಣಿಸ ಬಾ!
ಮುದ್ದನಿತ್ತು ಉಣಿಸ ಬಾ!
ಹಸಿದರಾನು ಮೊಲೆಯ ನೂಡು.

ದೂರ! ದೂರ! ದೂರ!
ವ್ಯರ್ಥ ನನ್ನ ಮುಟ್ಟಬೇಡ.
ಸ್ಫೂರ್ತಿಯೆಲ್ಲ ಕೆಡಿಸ ಬೇಡ.
ತಾಯಿ ನನ್ನ ಕಾದಿರು.

ತಾಯಿ ನಿನ್ನ ಮಡಿಲಿಗೊಮ್ಮೆ ಬರಲಿರುವೆ ಕಾಯು.
ಆಗ ಶಾಂತ ವಾಯು.

ಹೊರಟಲ್ಲಿಗೆ ಬರುವುದೆಲ್ಲ ಲೋಕ ವಾಡಿಕೆ.
ಮೂಡಿ ಮುಳುಗಿ ತಿರುಗುವುದು ರೂಢಿಯಾಡಿಕೆ.




# ಅವ್ವೈಯಾರ ಕೃತಿಗಳು

ಶ್ರೀ: ಎಲ್. ಗುಂಡಪ್ಪ, ಎಂ.ಎ.

## ೨ ಕೊನ್ರೈವೇನ್ದನ್

[ಇದು ಬಾಲಪಾಠದಲ್ಲಿ ಎರಡನೆಯ ಹಂತ. ಆತ್ತಿಸೂಡಿಗಿಂತ ದೊಡ್ಡದೊಡ್ಡ ವಾಕ್ಯಗಳಿವೆ. ಗಾದೆಗಳಂತೆ ಅನುಭವಸಾರವನ್ನು ಅಡಗಿಸಿ ಹೇಳುವ ೯೧ ವಚನಗಳನ್ನು ಒಳಕೊಂಡಿದೆ.
ಆತ್ತಿಸೂಡಿಯಂತೆಯೇ ಇದಕ್ಕೂ ಪ್ರಾರ್ಥನೆಯ ಪದ್ಯದ ಮೊದಲ ಪದದಿಂದ 'ಕೊನ್ರೈ ವೇನ್ದನ್' ಎಂದು ಹೆಸರು ಬಂದಿದೆ.
ಇದರ ಅನುವಾದದಲ್ಲಿಯೂ 'ಆತ್ತಿಸೂಡಿ'ಯಲ್ಲಿ ಬಳಸಿದ ಕ್ರಮವನ್ನೇ ಬಳಸಿದೆ.]

### ದೇವರ ಪ್ರಾರ್ಥನೆ

ಕೊನ್ರೈ ವೇನ್ದನ್ ಶೆಲ್ವನಡಿಯಿಣೈ । ಎನುಮೇತ್ತಿ ತ್ತೊಟುಪೋಮಿಯಾಮೇ

ಕೊಂದೆ ಮಾಲೆ ಮುಡಿದ ದೊರೆಯ ಮಗನ ಅಡಿಗಳೆರಡುಮಂ
ಎಂದುಮೆಂದುಂ ನುತಿಸಿ ಪೂಜಿಸುವೆವು ನಾವು ಭಕ್ತಿಯಿಂ.

ಕೊಂದೆ = ಕಕ್ಕೆ. ಕಕ್ಕೆಯ ಹೂವು ಶಿವನಿಗೆ ಮೆಚ್ಚು. ಕೊಂದೆಮಾಲೆ ಮುಡಿದ ದೊರೆ=ಶಿವ. ಅವನಮಗ : ಗಣಪತಿ.

### ಗ್ರಂಥ

೧ ಅನ್ನೈಯುಮ್ ಪಿತಾವುಮ್ ಮುನ್ನಱಿ ದೆಯ್ವಮ್.

ಅಮ್ಮನೂ ಅಪ್ಪನೂ ಕಣ್ಣರಿವ ದೈವ.

ತಾಯಿಯೂ ತಂದೆಯೂ ಪ್ರತ್ಯಕ್ಷ ದೇವರು. "ಮಾತೃದೇವೋ ಭವ. ಪಿತೃದೇವೋ ಭವ"—ವೇದ.

೨ ಆಲಯನ್ತೊಟುವದು ಶಾಲವು ನನು.

ಆಲಯದಿ ಪೂಜಿಪುದು ಮಿಗಿಲು ಮೇಲಹುದು.

ಆಲಯ = ದೇವಸ್ಥಾನ.

೩ ಇಲ್ಲಱಮಲ್ಲದು ನಲ್ಲಱಮನು.

ಮನೆಯರವಲ್ಲದ್ದು ನಲ್ಲರವಲ್ಲ.

ಗೃಹಸ್ಥಧರ್ಮವಲ್ಲದ್ದು ಒಳ್ಳೆಯ ಧರ್ಮವಲ್ಲ. ಎಲ್ಲಾ ಆಶ್ರಮಧರ್ಮಗಳಿಗಿಂತಲೂ ಗೃಹಸ್ಥಾಶ್ರಮ ಧರ್ಮವೇ ಶ್ರೇಷ್ಠವಾದ್ದು ಎಂದು ತಾತ್ಪರ್ಯ.

೪ ಈಯಾರ್ ತೇಟ್ಟೈ ತ್ತೀಯಾರ್ ಕೊಳ್ವರ್.

ಈಯದರ ಗಳಿಕೆಯನು ಕೇಡಿಗರು ಕೊಳ್ಳುವರು

ಗಳಿಕೆ= ಗಳಿಸಿದ್ದು; ಸಂಪಾದನೆ.

೫ ಉಣ್ಡಿ ಶುರುಙ್ಗುದಲ್ ಪೆಣ್ಡಿರ್ಕ್ಕಟಿಗು.

ಉಣಿಸುಕೊರೆಮಾಡುವುದು ಹೆಂಗುಸರ್ಗೆ ಚೆಲುವು.

ಹೆಂಗಸು ಮಿತವಾಗಿ ಊಟಮಾಡುವುದೊಳ್ಳೆಯದು. ಮಿತಾಹಾರ ಎಲ್ಲರಿಗೂ ಒಳ್ಳೆಯದೇ ಆದರೂ ಹೆಂಗಸಿಗೆ ಬಹು ಮುಖ್ಯ ಎಂದು ಅಭಿಪ್ರಾಯ.

೬ ಊರುಡನ್ ಪಗೈಕ್ಕಿನ್ ವೇರುಡನ್ ಕೆಡುಮ್.

ಊರೊಡನೆ ಹಗೆಗೊಂಡರೆ ಬೇರೊಡನೆ
ಕೆಡುವನು.

೭ ಎಣ್ಣುಮೆಟುತ್ತುಮ್ ಕಣ್ಣೆನ ತ್ತಗುಮ್.

ಎಣಿಕೆಯೂ ಅಕ್ಕರವೂ ಕಣ್ಣೆನ ತಕ್ಕುವು.

ಗಣಿತ ಸಾಹಿತ್ಯ ಎರಡೂ ಮನುಷ್ಯನಿಗೆ ಎರಡು ಕಣ್ಣುಗಳು—ಎನ್ನಿಸಿಕೊಳ್ಳುತ್ತವೆ.

೮ ಏವಾ ಮಕ್ಕಳ್ ಮೂವಾ ಮರುನ್ದು.

ಹೇಳದ ಮಕ್ಕಳು ಮುಪ್ಪೆಯ್ದದ ಮದ್ದು.

ಹೀಗೆಮಾಡೆಂದು ಹೇಳಬೇಕಾಗಿಲ್ಲದ, ಹೇಳದೆಯೆ ಇಂಗಿತವರಿತು ಕೆಲಸ ಮಾಡುವ ಮಕ್ಕಳು ಅವರ ತಂದೆ ತಾಯಿಗಳಿಗೆ ಮುಪ್ಪು ತರದಿರುವುದಕ್ಕೆ ಸಾಧಕವಾದ ಔಷಧ; ಎಂದರೆ ಅಮೃತದಂತಿರುವರು.

೯ ಐಯಮ್ ಪುಗಿನುಮ್ ಶೆಯ್ವನ ಶೆಯ್.

ಭಿಕ್ಷಕೆ ಹೋದರೂ ಮಾಳ್ಪವ ಮಾಡು.

ಭಿಕ್ಷಕ್ಕೆ ಹೋಗಬೇಕಾದ ಸ್ಥಿತಿ ಬಂದರೂ ಮಾಡಬೇಕಾದ ಕರ್ತವ್ಯಗಳನ್ನು ಮಾಡಿಯೇ ತೀರಬೇಕು; ಬಿಡಬಾರದು.

೧೦ ಒರುವನೈ ಪ್ಪಱ್ರಿ ಯೋರಗತ್ತಿರು.

ಒಬ್ಬನ ನೆಮ್ಮಿ ಒಂದೆಡೆಯಿರು.

ಯೋಗ್ಯನಾದವನೊಬ್ಬನನ್ನು ಆಸರೆಯಾಗಿ ಹಿಡಿದುಕೊಂಡು ಒಂದು ಕಡೆ ವಾಸಮಾಡು.

೧೧ ಓದಲಿ ನನ್ಱೇ ವೇದಿಯರ್ ಕ್ಕೊೞುಕ್ಕವ್.

ಓದಿಗಿಂತ ನಲ್ಲದು ವೈದಿಕರ್ಗೆ ನಡತೆ.

ಬ್ರಾಹ್ಮಣನಿಗೆ ಆಚಾರ ಮುಖ್ಯ ; ಆವನಿಗೆ ವಿದ್ಯೆಕ್ಕಿಂತ ಆಚಾರವೇ ಮೇಲು. ಓದು = ವಿದ್ಯೆ. ನಲ್ಲದು = ಒಳಿಯದು ; ಶ್ರೇಯಸ್ಕರ.

೧೨ ಎವಿಯುವ್ ಪೇಶುದಲಾಕ್ಕತ್ತಿಱ್ಕೞಿವು.

ಕರುಬನಾಡುವುದು ಸಿರಿಗಳಿವಹುದು.

ಹೊಟ್ಟೆಕಿಚ್ಚಿನ ಮಾತಾಡುವುದರಿಂದ ಸಂಪತ್ತು ಅಭಿವೃದ್ಧಿ ಹೊಂದದೆ ಹಾಳಾಗಿ ಹೋಗುತ್ತದೆ.

೧೩ ಅಃಕಮುವ್ ಕಾಶುವ್ ಶಿಕ್ಕೆನ ತ್ತೇಡು.

ಕಾಳನೂ ಕಾಸನೂ ಕಳೆಯದೆ ಕೂಡಿಡು.

೧೪ ಕಱ್ಪೆನಪ್ಪಡುವದು ಶೊಱ್ ಱಮ್ಬಾಮೈ.

ಕರ್ಪಿನಪಡುವುದು ಮಾತುಮೀರದಿರುವುದು.

ಕರ್ಪು = ಪಾತಿವ್ರತ್ಯ. ಗಂಡಸಿನ ನಿಷ್ಠೆಗೂ ಈ ಮಾತು ಅನ್ವಯಿಸುತ್ತದೆ. ಗಂಡಸಿಗಾಗಲಿ ಹೆಂಗಸಿಗಾಗಲಿ ಆಡಿದ ಮಾತನ್ನು ಮೀರದೆ ಇರುವುದು ನಿಷ್ಠೆ ಎನ್ನಿಸಿಕೊಳ್ಳುತ್ತದೆ.

೧೫ ಕಾವಱ್ಱಾನೇ ಪಾವೈಯರ್ ಕ್ಕೞಗು.

ಕಾವಲು ತಾನೇ ಭಾಮೆಯರ್ಗೆ ಚೆಲುವು.

ಕಾವಲು = ಪಾತಿವ್ರತ್ಯವನ್ನು ಕಾದುಕೊಳ್ಳುವುದು. ಪಾತಿವ್ರತ್ಯ ರಕ್ಷಣೆಯೇ ಹೆಂಗಸಿಗೆ ನಿಜವಾದ ಸೌಂದರ್ಯ.

೧೬ ಕಿಟ್ಟಾದಾಯಿನ್ ವೆಟ್ಟೆನ ಮಱ.

ಸಿಕ್ಕದುದಾದರೆ ತಟ್ಟನೆ ಮರೆ.

ಬಯಸಿದ್ದು ದೊರೆಯದೆ ಹೋದರೆ, ಅದನ್ನೇ ನೆನೆದು ಕೊರಗುತ್ತಿರಬಾರದು. ಅದನ್ನು ಮರೆತುಬಿಡಬೇಕು.

೧೭ ಕೀೞೋರಾಯಿನುವ್ ತಾೞ ವುರೈ.

ಕೀಳರಾದರೂ ತಗ್ಗಿಯೆ ನುಡಿ.

ತನಗಿಂತ ಕೆಳಅಂತಸ್ತಿನವರೊಡನೆಯೂ ನಮ್ರತೆಯಿಂದಲೇ ಮಾತನಾಡಬೇಕು.

೧೮ ಕುಱಮ್ಪಾರ್ಕ್ಕಿಱ್ ಶುಱಮಿಲ್ಲೈ.

ಕುಂದ ನೋಡಿದರೆ ಬಂಧುಗಳಿಲ್ಲ.

[ಕುಱ್ಱಮ್ + ಪಾರ್ಕ್ಕಿನ್ + ಶುಱ್ಱಮ್ + ಇಲ್ಲೈ]

೧೯ ಕೂರಮ್ಬಾಯಿನುವ್ ವೀರಿಯವ್ ಪೇಶೇಲ್.

ಕೂರಂಬಾದರೂ ವೀರ್ಯವನಾಡದಿರು.

ತನ್ನಲ್ಲಿ ಪ್ರಬಲ ಶಸ್ತ್ರಾಸ್ತ್ರಗಳಿದ್ದರೂ ತನ್ನ ಪರಾಕ್ರಮವನ್ನು ಹೊಗಳಿಕೊಳ್ಳಬಾರದು.

೨೦ ಕೆಡುವದು ಶೆಯ್ಯಿನ್ ವಿಡುವದು ಕರುಮುವ್.

ಕೆಡುವುದು ಗೈದರೆ ಬಿಡುವುದು ಕಾರ್ಯ.

ಯಾರಾದರೂ ತನಗೆ ಕೇಡು ಮಾಡಿದರೆ ಅವರ ಸಹವಾಸವನ್ನು ಬಿಡುವುದೇ ಸರಿಯಾದ ಕೆಲಸ. 'ತನಗೆ ಇತರರು ಕೆಟ್ಟದ್ದು ಮಾಡಿದರೆ ಅದನ್ನು ಮರೆತುಬಿಡಬೇಕು' ಎಂದೂ ಅರ್ಥ ಮಾಡುತ್ತಾರೆ.

೨೧ ಕೇಟ್ಟಿಲುಱುದಿ ಕೂಟ್ಟುಮುಡೈಮೈ.

ಕೇಡಿನಲಿ ಸ್ಥೈರ್ಯ ಕೂಡಿಸುವುದೊಡವೆಯು.

ಒಡವೆ = ವಸ್ತು, ಸಂಪತ್ತು. ಇದ್ದದ್ದು ಕಳೆದುಕೊಂಡು ಕೇಡು ಬಂದಾಗ ಮನಸ್ಸಿನ ಸ್ಥೈರ್ಯವನ್ನು ಕಳೆದುಕೊಳ್ಳದೆ ಇದ್ದರೆ ಆ ಸ್ಥೈರ್ಯವೇ ಸಂಪತ್ತನ್ನು ಮತ್ತೆ ಕೂಡಿಸುತ್ತದೆ.

೨೨ ಕೈಪ್ಪೊರುಡನ್ನಿನ್ ಮೆಯ್ಪ್ಪೊರುಳ್ ಕಲ್ವಿ.

ಕೈ ಪುರುಳಿಂದೆಯುಂ ನಿಜಪುರುಳ್ ಕಲ್ವಿ.

ಕೈಯಲ್ಲಿರುವ ಹಣಕ್ಕಿಂತ ಹೆಚ್ಚು ನಿಜವಾದ ಧನ ವಿದ್ಯೆ. (ಪುರುಳ್ = ವಸ್ತು; ಧನ. ಕಲ್ವಿ = ವಿದ್ಯೆ).

೨೩ ಕೊಱವನಱಿದ ಲುಱಿಡತ್ತುದವಿ.

ದೊರೆಯರಿದಿರುವುದು ಬಂದೆಡೆ ನೆರವು.

ಬಂದೆಡೆ = ಆಪತ್ತು ಬಂದಾಗ. ದೊರೆಗೆ ತಿಳಿದವರಾಗಿರುವುದರಿಂದ ಕಷ್ಟಕಾಲದಲ್ಲಿ ಸಹಾಯವಾಗುತ್ತವೆ.

೨೪ ಕೋಟ್ಟೆವಿಕ್ಕುಱೈ ಕ್ಕಾಱ್ಱಿಡ ನೆರುಪ್ಪು.

ಪಿಸುಣ್ಗಿವಿಗೆ ಚಾಡಿ ಗಾಳಿಗೂಡಿದ ಬೆಂಕಿ.

ಪಿಸುಣ್ಗಿವಿ = ಚಾಡಿ ಮಾತ್ತು ಕೇಳುವ ಕಿವಿ.

೨೫ ಕೌವ್ವೆಲ್ಲವರುಕ್ಕುವ್ ಪಗೈ.

ನಿಂದೆಯ ನುಡಿದರೆ ಎಲ್ಲರಿಗೂ ಹಗೆ.

೨೬ ಶನ್ದದಿಕ್ಕೞಗು ವನ್ದಿ ಶೆಯ್ಯಾಮೈ.

ಸಂತತಿಗೆ ಚೆಲುವು ಬಂಜೆಗೈಯದಿರುವುದು.

ಹೆಂಡತಿಯನ್ನು ಬಿಟ್ಟು ಎಲ್ಲೋ ಇರದೆ ಅವಳೊಡನೆ ಬಾಳಿ ಮಕ್ಕಳನ್ನು ಪಡೆಯುವುದು ಸಂತತಿಗೆ ಸೊಗಸು.

೨೭ ಶಾನ್ಱೋರೆನ್ಗೈ ಯೀನ್ಱೋಟ್ಕೞಗು.

ಸಂಪನ್ನರೆನ್ನುವುದು ಹೆತ್ತವಳ್ಗೆ ಚೆಲುವು.

ತನ್ನ ಮಕ್ಕಳನ್ನು 'ಇವರು ಸಂಪನ್ನರು' ಎಂದು

ಅರಿತವರು ಅನ್ನುವುದು, ಅವರನ್ನು ಹೆತ್ತ ತಾಯಿಗೆ ಸೊಗಸು.

೨೮ ಶಿವತ್ತೈ ಪ್ಪೇಣಿ ಜವತ್ತಿಜ್ಞುಜಗು.

ಶಿವನ ಸೇವಿಸಲು ತಪಕ್ಕೆ ಚೆಲುವು.

೨೯ ಶೀರ್ರೈ ತ್ತೇಡಿ ನೇರ್ರೈ ತ್ತೇಡು.

ಸುಖವನರಸೆ ಉಳುಮೆಯನರಸು.

ಸುಖ ಬೇಕಾದರೆ ಉಳುಮೆ ಮಾಡು. ವ್ಯವಸಾಯ ವೃತ್ತಿಯೇ ಸುಖಕ್ಕೆ ಸಾಧನ—ಎಂದು ತಾತ್ಪರ್ಯ.

೩೦ ಶುಜಿತ್ತಿಜ್ಞುಜಗು ಶೂಜ ವಿರುತ್ತಲ್.

ನಂಟಿಗೆ ಚೆಲುವು ಸುತ್ತ ಸೇರಿಹುದು

ಬಂಧುಗಳೆಲ್ಲರನ್ನೂ ಜೊತೆ ಸೇರಿಸಿಕೊಂಡು ಅವರ ನಡುವೆ ಬಾಳುವುದೇ ನಂಟತನಕ್ಕೆ ಸಾರ್ಥಕ.

೩೧ ಶೂದುಮ್ ವಾದುಮ್ ವೇದನೈ ಶೆಯ್ಯುಮ್.

ಜೂದೂ ವಾದವೂ ವೇದನೆ ಗೈವುವು.

ಜೂಜಾಡುವುದೂ ವಾದಮಾಡುವುದೂ ಸಂಕಟ ವುಂಟುಮಾಡುತ್ತದೆ.

೩೨ ಶೆಯ್ದವ ಮರನ್ದಾಜ್ಕೈದವಮಾಳುಮ್.

ಗೈವ ತಪವನ್ ಮರೆಯೆ ಕೈತವವಾಳ್ವುದು.

ಕೈತವ= ವಂಚನೆ. ಒಬ್ಬನು ತಾನು ಮಾಡುತ್ತಿರುವ ತಪಸ್ಸನ್ನು ಮರೆತುಬಿಟ್ಟರೆ, ವಂಚನೆ ಅವನ ಮೇಲೆ ಅಧಿಕಾರ ನಡಸುತ್ತವೆ; ಅವನು ವಂಚಕನಾಗುತ್ತಾನೆ.

೩೩ ಶೇಮಮ್ ಪುಗಿನುಮ್ ಯಾಮತ್ತುಜಜ್ಞ.

ಸೆರೆಯ ಹೊಕ್ಕರೂ ಯಾಮದಿ ಮಲಗು.

[ಪಾಠಾಂತರ: ಶೇಮಮ್ ಪುಗಿನಮ್ ಶಾಮತ್ತುಜಜ್ಞ.

ಕಾಪು ಸೇರಿದರೂ ನಡುವಿರುಳ್ ಮಲಗು.]

೩೪ ಶೈಯೊತ್ತಿರುನ್ದಾ ಲೈಯಮಿಟ್ಟುಣ್.

ಸಿರಿ ನೆರೆದಿದ್ದರೆ ಭಿಕ್ಷವಿಟ್ಟುಣ್ಣು.

೩೫ ಶೊಕ್ಕರೆನ್ಬವರತ್ತಮ್ ಪೆಜುವಾರ್.

ಚೊಕ್ಕವರೆಂಬವರರ್ಥವ ಪಡೆವರು.

ಚೊಕ್ಕವರು=ಪರಿಶುದ್ಧರು. ಅರ್ಥ:—ಪುರುಷಾರ್ಥಗಳು. 'ಧನವುಳ್ಳವರು ಉಳಿದ ಪುರುಷಾರ್ಥಗಳನ್ನು ಪಡೆಯುತ್ತಾರೆ' ಎಂದೂ, 'ಉದ್ಯೋಗಶೀಲರು ಧನ ಪಡೆಯುತ್ತಾರೆ' ಎಂದೂ ಅರ್ಥಮಾಡುವುದುಂಟು.

೩೬ ಶೋಮ್ಬುರೆಮ್ಬುವರ್ ತೇಮ್ಬಿತ್ತಿರಿವಾರ್.

ಅಲಸರೆಂಬವರಳಲಿ ಅಲೆವರು.

೩೭ ತನ್ದೈ ಶೊನ್ಮಿಕ್ಕ ಮಂದಿರಮಿಲ್ಲೈ.

ತಂದೆಸೊಲ್ಲಿಂ ಮಿಕ್ಕ ಮಂತ್ರವಿಲ್ಲ.

ತಂದೆಯ ಮಾತಿಗಿಂತ ಹೆಚ್ಚಿನ ಮಂತ್ರವಿಲ್ಲ. (ಸೊಲ್ = ಮಾತು)

೩೮ ತಾಯಿಜ್ಜಿಜನ್ದೊರು ಕೋಯಿಲುಮಿಲ್ಲೈ.

ತಾಯಿಂಡ ಮಿಗಿಲಾದ ಗುಡಿಯೊಂದುಮಿಲ್ಲ.

೩೯ ತಿರ್ರೈಗಡಲೋಡಿಯುಮ್ ದ್ದಿರವಿಯನ್ದೇಡು.

ತೆರೆಗಡಲೋಡಿಯೂ ದ್ರವ್ಯವ ಗಳಿಸು.

ತೆರೆಯೆದ್ದು ಬಿದ್ದು ಅಪಾಯಕಾರಿಯಾದ ಸಮುದ್ರದ ಮೇಲೆ ಪ್ರಯಾಣ ಮಾಡಿಯಾದರೂ ಹಣವನ್ನು ಸಂಪಾದಿಸು.

೪೦ ತೀರಾ ಕ್ಕೋಪಂ ಪೋರಾ ಮುಡಿಯುಮ್.

ತೀರದ ಕೋಪ ಹೋರಾಗಿ ಮುಗಿವುದು.

ಹೋರು = ಹೋರಾಟ, ಕಲಹ. ತಣಿಯದ ಕೋಪ ಕಲಹಕ್ಕೆ ಕಾರಣವಾಗುತ್ತದೆ. ಕೋಪವನ್ನು ಅಡಗಿಸಿಕೊಳ್ಳದಿದ್ದರೆ ಕಲಹವಾಗಿಯೇ ತೀರುತ್ತದೆ.

೪೧ ತುಡಿಯಾ ಪ್ಪೆಣ್ಡಿರ್ ಮಡಿಯಿ ನೆರುಪ್ಪು.

ತುಡಿಯದ ಹೆಂಡಿರು ಮಡಿಲಲಿ ಬೆಂಕಿ.

ಗಂಡನ ಕಷ್ಟದಲ್ಲಿ ಮರುಗದ ಹೆಂಡತಿ ಮಡಿಲಲ್ಲಿ ಕಟ್ಟಿಕೊಂಡ ಬೆಂಕಿಯ ಹಾಗೆ.

೪೨ ತೂಜುಮ್ ಪೆಣ್ಡಿರ್ ಕೂಜಿನ ತ್ತಗುಮ್.

ದೂರುವ ಹೆಂಡಿರು ಯಮನೆನೆ ತಕ್ಕವರ್.

ಗಂಡಂದಿರ ಮೇಲೆ ತಪ್ಪು ಹೊರಿಸಿ ದೂರುವ ಹೆಂಡಿರನ್ನು ಆ ಗಂಡಂದಿರಿಗೆ ಯಮ ಎನ್ನಬಹುದು.

೪೩ ತೆಯ್ವ ಇಜ್ಜೀಜಿಜ್ ಕೈದವ ಮಾಳುಮ್.

ದೈವ ಮುಳಿದರೆ ಕೈತಪವಳಿವುದು.

ದೈವ ಕೋಪಿಸಿದರೆ ಸಿದ್ಧವಾಗಿ ಕೈಯಲ್ಲಿರುವ ತಪಸ್ಸಿನ ಫಲವೂ ಹಾಳಾಗುತ್ತದೆ.

೪೪ ತೇಡಾದಜಿಕ್ಕಿಜ್ ಪಾಡಾ ಮುಡಿಯುಮ್.

ಗಳಿಸದೆ ಅಳಿದರೆ ದುಗುಡದೆ ಮುಡಿವುದು.

ಅಳಿದರೆ = ಬಳಸಿ ನಾಶಮಾಡಿದರೆ. ಇರುವ ಸಂಪತ್ತನ್ನೇ ಬಳಸಿ ತಿನ್ನುತ್ತಾ ಮತ್ತೆ ಸಂಪಾದಿಸದೆ ಇದ್ದರೆ, ಕಡೆಗೆ ಕಷ್ಟದಲ್ಲೇ ಕೊನೆಯಾಗುತ್ತದೆ.

೪೫ ತೈಯುಮ್ ಮಾಶಿಯುಮ್ ವೈಯಗತ್ತುಜಜ್ಞ.

ತೈಯಲೂ ಮಾಶಿಯಲೂ ಹುಲ್ಮನೆಯೊಳ್ಮಲಗು.

ತೈಮಾಶಿ = ಪುಷ್ಯ, ಮಾಘ ಮಾಸಗಳು [ಜನವರಿ ೧೫ರಿಂದ ಮಾರ್ಚಿ ೧೫ರವರೆಗೆ]. ಈ ತಿಂಗಳುಗಳು ಚಳಿ

ಗಾಲ. ಆಗ ಹುಲ್ಲು ಹೊದಸಿದ ಗುಡಿಸಲಿನಲ್ಲಿ ಮಲಗಿದರೆ ಬೆಚ್ಚಗಿರುತ್ತದೆ.

೪೬ ತೊಱುದೂಣ್ ಶುವೈಯಿ ನುಱುದೂಣಿನಿದು.

ಊಳಿಗದುಣಿಸಿನ ಸವಿಯಿಂದುತ್ತುಣಿಸಿನಿದು.

ಮತ್ತೊಬ್ಬರನ್ನು ಸೇವಿಸಿ ಊಟಮಾಡುವ ರಸಗವಳದ ರುಚಿಗಿಂತ ತಾನೇ ಉತ್ತು ಬೆಳೆದು ತಿನ್ನುವ ಕದನ್ನದ ರುಚಿಯೇ ಹೆಚ್ಚು.

೪೭ ತೋೞಿನೋಡು ಮೇೞ್ಮೈವ್ಯೈ ಪೇಶೇಲ್.

ಗೆಳೆಯನೊಡನೆಯೂ ಬಡತನ ಹೇಳಬೇಡ.

೪೮ ನಲ್ಲಿಣಕ್ಕಮಲ್ಲದಲ್ಲಲ್ಪಡುತ್ತುವ್.

ಒಳ್ಳೆ ಜೊತೆಯಲ್ಲದ್ದು ಸಂಕಟಪಡಿಸುವುದು.

ದುಷ್ಟರ ಸಹವಾಸ ದುಃಖಕ್ಕೆ ಗುರಿಮಾಡುತ್ತದೆ: ಸಂಗತಿ ಕೆಟ್ಟುದು ಸಂಕಟಪಡಿಕುಂ.

೪೯ ನಾಡೆಜ್ಗವ್ ವಾೞ ಕ್ಕೇಡೊನ್ರುಮಿಲ್ಲೈ.

ನಾಡೆಲ್ಲ ಬಾಳಿದರೆ ಕೇಡೊಂದುಮಿಲ್ಲ.

೫೦ ನಿಜ್ಕ ಕ್ಕಜಲ್ ಶೊಜ್ಱಿಜವ್ವಾಮೈ.

ನಿಲ್ಲೆ ಕಲಿವುದು ಸೊಲ್ ತಪ್ಪದಿಹುದು.

ಜ್ಞಾನ ನೆಲೆನಿಲ್ಲುವಂತೆ ಕಲಿಯುವುದು ಎಂದರೆ ಆಡಿದ ಮಾತು ತಪ್ಪದೆ ಇರುವುದು. 'ಸೊಲ್ ತಪ್ಪದಿರುವುದು' ಎಂಬುದಕ್ಕೆ 'ಅವರಾಡಿದ ಮಾತು ಹುಸಿಯಾಗದೆ ಫಲಕಾರಿಯಾಗುತ್ತದೆ' ಎಂದೂ, 'ಅವರು ಆಡಿದ ಮಾತಿಗೆ ತಪ್ಪದೆ ನಡೆದುಕೊಳ್ಳುವರು' ಎಂದೂ ಅರ್ಥಮಾಡಬಹುದು.

೫೧ ನೀರಗವ್ ಪೊರುನ್ದಿಯ ವೂರಗತ್ತಿರು.

ನೀರ್ ನೆರೆದುಳ್ಳ ಊರೊಳಗಿರು.

ನೆರೆದುಳ್ಳ = ತುಂಬಿರುವ. ಜಲಸಮೃದ್ಧಿಯಿರುವ ಊರಿನಲ್ಲಿ ವಾಸಮಾಡು.

೫೨ ನುಣ್ಣಿಯ ಕರುಮಮುಂ ಮೆಣ್ಣಿ ತ್ತುಣಿ.

ಸಣ್ಣ ಕಾರ್ಯವನೂ ಎಣಿಸಿ ನಿಶ್ಚಯಿಸು.

ಸಣ್ಣ ಕೆಲಸವೆಂದು ಉದಾಸೀನಮಾಡದೆ ಚೆನ್ನಾಗಿ ಆಲೋಚಿಸಿ ನಿಶ್ಚಯಿಸಬೇಕು.

೫೩ ನೂನ್ಮುಱೈ ತೆರಿನ್ದು ಶೀಲತ್ತೊೞುಗು.

ಶಾಸ್ತ್ರಕ್ರಮವರಿತು ಶೀಲದಲಿ ನಡೆ.

೫೪ ನೆಞ್ಜತ್ತೊಳಿತ್ತೊರು ವಞ್ಜಗವಿಲ್ಲೈ.

ಮನಕೆ ಮರೆಗೈದೊಂದು ವಂಚನೆಯುಮಿಲ್ಲ.

ತನ್ನ ಮನಸ್ಸಿಗೆ ಗೋಚರವಾಗದೆಹೋಗುವ ವಂಚನೆ ಒಂದೂ ಇಲ್ಲ. ವಂಚಕನಿಗೆ ತಾನು ಮಾಡುವ ವಂಚನೆಗೊತ್ತೇ ಇರುತ್ತದೆ.

೫೫ ನೇರಾ ನೋನ್ಬು ಶೀರಾಗಾದು.

"ಒಪ್ಪದ ನೊಂಪಿ ಒಪ್ಪವೆ ಆಗದು.

ನೋಂಪಿ= ವ್ರತ; ತಪಸ್ಸು. ಮನಸ್ಸೊಪ್ಪಿ ಮಾಡದ ತಪಸ್ಸು ಚೆನ್ನಾಗುವುದಿಲ್ಲ; ಫಲಪ್ರದವಾಗಿ ಮುಗಿಯುವುದಿಲ್ಲ.

೫೬ ನೈಬವರೆನಿನು ನೊಯ್ಯುವುರೈಯೇಲ್.

ಕೀಳರೆ ಆದರೂ ಕೀಳ್ನುಡಿಯದಿರು.

'ನೋವರೆ ಆದರೂ . . .' ಎಂದೂ ಅರ್ಥಮಾಡಬಹುದು. ಪ್ರತಿಭಟಿಸಿ ನುಡಿಯದೆ ಮನಸ್ಸಿನಲ್ಲಿ ನೊಂದುಕೊಳ್ಳುವರಾದರೂ ಅಂಥವರ ವಿಷಯದಲ್ಲಿ ಕೀಳುಮಾತಾಡಬಾರದು—ಎಂದು ಅಭಿಪ್ರಾಯ.

೫೭ ನೊಯ್ಯವರೆನ್ಬವರ್ ವೆಯ್ಯವರಾವರ್.

ಅಲ್ಪರೆಂಬವರ್ ಕ್ರೂರಿಗಳಾದವರ್.

ಕ್ರೂರಿಗಳೇ ಅಲ್ಪರು—ಎಂದು ಅಭಿಪ್ರಾಯ. ಇದನ್ನು ಬೇರೊಂದು ರೀತಿಯಲ್ಲಿಯೂ ವಿವರಿಸುತ್ತಾರೆ. ಆಕಾರಾದಿಗಳಲ್ಲಿ ಅಲ್ಪರಾಗಿ ಕಾಣುವವರೂ ಅವರ ಕಾರ್ಯಾದಿಗಳಿಂದ ಎಲ್ಲರ ಗಮನವನ್ನೂ ಸೆಳೆಯುವಂಥವರಾಗುತ್ತಾರೆ.

೫೮ ನೋನ್ಬೆನ್ಬದುವೇ ಕೊನ್ರು ತಿನ್ನಾಮೈ.

ನೋಂಪಿಯೆಂಬುದೇ ಕೊಂದು ತಿನ್ನದುದು. ನೋಂಪಿ = ವ್ರತ.

೫೯ ಪಣ್ಣಿಯ ಪಯಿರಿಜ್ ಪುಣ್ಣಿಯಮ್ ತೆರಿಯುಮ್.

ಪಣ್ಣಿದ ಪಯಿರಿಂ ಪುಣ್ಯಂ ತಿಳಿಗುಂ.

ಪಣ್ಣಿದ = ಮಾಡಿದ ; ತಿಳಿಗುಂ = ತಿಳಿಯುತ್ತದೆ.

೬೦ ಪಾಲೋಡಾಯಿನುಮ್ ಕಾಲಮರಿನ್ದುಣ್.

ಹಾಲೊಡನಾದರೂ ಕಾಲವರಿದುಣ್ಣು.

೬೧ ಪಿಱನ್ ಮನೈ ಪುಗಾಮೈಯಱಮೆನ ತ್ತಗುಮ್.

ಹೆರಮಡದಿ ಹೊಗದಿಹುದು ಅರಮೆನ್ನ ತಕ್ಕುದು.

ಹೆರಮಡದಿ = ಬೇರೊಬ್ಬನ ಹೆಂಡತಿ; ಅರ = ಧರ್ಮ. ಪರಸ್ತ್ರೀ ಸಂಗಮಾಡದಿರುವುದು ಧರ್ಮ ಎನ್ನಿಸಿಕೊಳ್ಳುತ್ತದೆ.

೬೨ ಪೀರಮ್ಪೇಣಿ ಪಾರನ್ತಾಙ್ಗವ್.

ಮೊಲೆಹಾಲ ಕುಡಿದವನು ಭಾರವನು ತಾಳುವನು.

೬೩ ಪುಲೈಯುಙ್ಗೊಲೈಯು ಙ್ಗಳವುನ್ದವಿರ್.

ಅಡಗನು ಕೊಲೆಯನು ಕಳವನು ತೊರೆ.

ಅಡಗು = ಮಾಂಸ.

೬೪ ಪೂರಿಯೋರ್ಕ್ಕಿಲ್ಲೈ ಶೀರಿಯವೊೞುಕ್ಕಮ್.
ಕೀಳರ್ಗಿಲ್ಲ ಮೇಲಾಚಾರ.

೬೫ ಪೆಱ್ಱೋರ್ಕ್ಕಿಲ್ಲೈ ಶುಱ್ಱಮುಂ ಞಾನಮುಮ್.
ಪಡೆದವರ್ಗಿಲ್ಲ ಬಳಗವೂ ಸಿಟ್ಟೂ.

ತತ್ತ್ವಜ್ಞಾನವನ್ನು ಪಡೆದವರಿಗೆ ಬಂಧುಗಳ ಮೇಲೆ ಆಸೆಯೂ, ಅಲ್ಲದವರ ಮೇಲೆ ಕೋಪವೂ ಇಲ್ಲ. ಜ್ಞಾನಿಗಳಿಗೆ ರಾಗದ್ವೇಷಗಳಿಲ್ಲ.

೬೬ ಪೇದೈಮೈಯೆನ್ಬದು ಮಾದರ್ಕ್ಕಣಿಗಲಮ್.
ಮುಗ್ಧತೆಯೆಂಬುದು ಮಡದಿಯ ಗೊಡವೆ.

೬೭ ಮೈಯುೞ್ಚೆನಾಲ್ ವೈಯನ್ದಾಙ್ಗುಮ್.
ಮೆಲ್ಲನೆ ನಡೆದರೆ ಲೋಕವೆ ತಾಳ್ವುದು.

ಮೃದುವಾಗಿ ಸನ್ಮಾರ್ಗದಲ್ಲಿ ನಡೆದರೆ ಅವನನ್ನು ಲೋಕವೇ ಆದರಿಸುವುದು.

೬೮ ಪೊಲ್ಲಾಙ್ಗೆನ್ಬವೈ ಯೆಲ್ಲಾನ್ದವಿರ್.
ಹೊಲ್ಲವು ಎಂಬವನೆಲ್ಲವ ತೊರೆ.
ಹೊಲ್ಲವು = ಕೆಟ್ಟವು.

೬೯ ಪೋನಗಮೆನ್ಬದು ತಾನುಣ್ಡುಣ್ಣಲ್.
ಭೋಜನವೆಂಬುದು ತಾನುತ್ತುಂಬುದು.

೭೦ ಮರುನ್ದೇಯಾಯಿನುಮ್ ವಿರುನ್ದೋಡುಣ್.
ಅಮರ್ದೇ ಆದರೂ ಬಿರ್ದೊಡನುಣ್ಣು.
ಅಮರ್ದು = ಅಮೃತ. ಬಿರ್ದು = ಅತಿಥಿ.

೭೧ ಮಾರಿಯಲ್ಲದು ಕಾರಿಯಮಿಲ್ಲೈ.
ಮೋಡವಿಲ್ಲದೆ ಕಾರ್ಯವೆ ಇಲ್ಲ.

೭೨ ಮಿನ್ನುಕ್ಕೆಲ್ಲಾಮ್ ಪಿನ್ನುಕ್ಕು ಮೞೈ.
ಮಿಂಚುಗಳ್ಗೆಲ್ಲಾ ಹಿಂದೆಯೆ ಮಳೆ.

ಮಿಂಚು ಮುಂದೆ ಬರುವ ಮಳೆಗೆ ಸೂಚನೆ. ಹಾಗೆಯೇ ಒಬ್ಬನ ಉತ್ಸಾಹ ಮೊದಲಾದ್ದು ಅವನಿಗೆ ಮುಂದೆ ಬರುವ ಮೇಲ್ಮೆಗೆ ಸೂಚನೆ—ಎಂದು ಭಾವ.

೭೩ ಮೀಹಾಮನಿಲ್ಲಾ ಮರಕ್ಕಲ ಮೋಡಾದು.
ಚಾಲಕನಿಲ್ಲದ ಹಡಗು ನಡೆಯದು.

೭೪ ಮುಞ್ಪಗಲ್ ಶೆಯ್ಯಿನ್ ಪಿಱ್ಪಗಲ್ ವಿಳೈಯುಮ್.
ಮುಂಬಗಲ್ ಗೆಯ್ದೊಡೆ ಪಿಂಬಗಲ್ ಬಳೆಗುಂ.

ಬೆಳಗ್ಗೆ ಮಾಡಿದರೆ ಸಂಜೆಗೇ ಅದರ ಫಲ ಕಾಣಿಸಿಕೊಳ್ಳುತ್ತದೆ. ಕರ್ಮಫಲ ಬಹು ಬೇಗ ಬರುತ್ತದೆ.

೭೫ ಮೂತ್ತೋರ್ ಶೊನ್ನ ವಾರ್ತ್ತೈಯಮಿರ್ದಮ್.
ಮುತ್ತವರಾಡಿದ ಮಾತದು ಅಮೃತ.

ಮುತ್ತವರು = ಮುಪ್ಪು ಬಂದವರು. ಅನುಭವಸ್ಥರಾದ ಹಿರಿಯರ ಮಾತು ಅಮೃತದಂತೆ ಶುಭಕಾರಿ.

೭೬ ಮೆತ್ತೈಯಿಲ್ ಪಡುತ್ತ ನಿತ್ತಿರೈಕ್ಕೞಗು.
ಮೆತ್ತೆಯಲಿ ಮಲಗುವುದು ನಿದ್ರೆಗೆ ಸೊಗಸು.

೭೭ ಮೇೞಿಚ್ಚೆಲ್ವಮ್ ಕೋೞೈ ಪಡಾದು.
ನೇಗಿಲ ಸಂಪತ್ತಳಿವು ಹೊಂದದು.

ಉಳುಮೆಯಿಂದ ಸಂಪಾದಿಸಿದ ಐಶ್ವರ್ಯ ನಾಶವಾಗುವುದಿಲ್ಲ.

೭೮ ಮೈವಿೞಿಯಾರ್ ತಮ್ ಮನೈಯಗನ್ನೊೞುಗು.
ಕಾಡಿಗೆಗಣ್ಣಿಯರ ಮನೆ ಬಿಟ್ಟು ನಡೆ.
ವೇಶ್ಯೆಯರ ಸಹವಾಸ ಮಾಡಬೇಡ.

೭೯ ಮೊೞಿವದು ಮಱುಕ್ಕಿನೞಿವದು ಕರುಮಮ್.
ಹೇಳುವುದ ಮೀರಿದರೆ ಹಾಳಹುದು ಕಾರ್ಯ.

ಹಿರಿಯರ ಹಿತವಚನವನ್ನು ಮೀರಿ ನಡೆದರೆ ಕೆಲಸ ಕೆಡುತ್ತದೆ.

೮೦ ಮೋನಮೆನ್ಬದು ಞಾನವರಮ್ಬು.
ಮೌನವೆಂಬುದು ಜ್ಞಾನದ ಎಲ್ಲೆ.

೮೧ ವಳವನಾಯಿನುಮಳವರಿನ್ದೞಿತ್ತುಣ್.
ವಳವನಾದರೂ ಅಳವರಿತು ಬಳಸಿಯುಣ್.

'ವಳವ' ಎಂಬುದು ಚೋಳರಾಜರ ಬಿರುದು. ಚೋಳರಾಜನ ಹಾಗೆ ಅಷ್ಟೈಶ್ವರ್ಯ ಸಂಪನ್ನನಾದರೂ ಆದಾಯಕ್ಕೆ ತಕ್ಕಂತೆ ಸರಿಹೊಂದಿಸಿಕೊಂಡು ವ್ಯಯ ಮಾಡಬೇಕು.

೮೨ ವಾನಞ್ಞುರುಙ್ಗಿಱ್ ದಾನಞ್ಞುರುಙ್ಗುಮ್.
ಮಳೆ ಕುಂದಿದರೆ ದಾನ ಕುಂದುವುದು.

[ವಾನಮ್+ಶುರಙ್ಗಿನ್+ತಾನಮ್+ಶುರಙ್ಗುಮ್]

೮೩ ವಿರುನ್ದಿಲೋರ್ಕ್ಕಿಲ್ಲೈ ಪೊರುನ್ದಿಯ ವೊೞುಕ್ಕಮ್.
ಬಿರ್ದಿಲ್ಲದರ್ಗಿಲ್ಲ ಹೊಂದುವಾಚಾರ.

ಬಿರ್ದು = ಅತಿಥಿ. ಅತಿಥಿ ಸತ್ಕಾರ ಮಾಡದವರು ಗೃಹಸ್ಥಧರ್ಮಕ್ಕೆ ಹೊಂದುವ ಸದಾಚಾರ ಇಲ್ಲದವರಾಗುತ್ತಾರೆ.

೮೪ ವೀರನ್ ಕೇಣ್ಮೈ ಕೂರಮ್ಬಾಗುಮ್.
ವೀರನ ಗೆಳೆತನ ಕೂರಂಬಹುದು.

ವೀರನ ಸ್ನೇಹವೊಂದಿದ್ದರೆ ಸಾಕು, ಅದೇ ಒಬ್ಬ

ನಿಗೆ ಕೈಯಲ್ಲಿ ಹರಿತವಾದ ಬಾಣವಿದ್ದ ಹಾಗೆ ರಕ್ಷಣೆಯಾಗುವುದು.

೮೫ ಉರವೋರೆನ್ಗೈ ಯಿರವಾದಿರುತ್ತಲ್.

ಬಲ್ಲಿದರೆಂಬುದು ಎರೆಯದೆ ಇರುವುದು.

ಎರೆ=ಬೇಡು. ಇನ್ನೊಬ್ಬರನ್ನು ಬೇಡದೆ ಇರುವುದೇ ನಿಜವಾಗಿ ಸಾಮರ್ಥ್ಯವೆನ್ನಿಸಿಕೊಳ್ಳುತ್ತದೆ.

೮೬ ಊಕ್ಕಮುಡೈಮೈ ಯಾಕ್ಕತ್ತಿಱ್ಕಬಿಗು.

ಉತ್ಸಾಹವಂತಿಕೆ ಸಿರಿತನಕೆ ಸೊಬಗು.

ಉತ್ಸಾಹವಿದ್ದರೆ ಸಂಪತ್ತು ಸಾಧಿಸುತ್ತದೆ.

೮೭ ವೆಳ್ಳೈಕ್ಕಿಲ್ಲೈ ಕಳ್ಳಚ್ಚಿನ್ದೈ.

ಬೆಳ್ಳನಿಗಿಲ್ಲ ಕಳ್ಳಚಿಂತೆ.

ಮನಸ್ಸು ಶುದ್ಧವಾಗಿರುವಾತನಿಗೆ ವಂಚನೆಯ ಯೋಚನೆಯೇ ಇಲ್ಲ (ಬೆಳ್ಳ = ಮನಸ್ಸಿನಲ್ಲಿ ಕಳಂಕವಿಲ್ಲದವನು).

೮೮ ವೇನ್ದನ್ ಶೀಱಿ ನಾನ್ದುಣೈ ಯಿಲ್ಲೈ.

ಅರಸ ಕೋಪಿಸಿದರೆ ಆಗುವ ನೆರವಿಲ್ಲ.

ಆಗುವ = ಆ ಸಮಯಕ್ಕೆ ಒದಗುವ; ರಕ್ಷಕನಾಗುವ.

೮೯ ವೈಯನ್ದೋಱು ನ್ದೆಯ್ವನ್ದೊಱು.

ಯೆಡೆಯೆಡೆಯಲ್ಲೂ ದೈವವನರ್ಚಿಸು.

ಎಲ್ಲ ಕ್ಷೇತ್ರಗಳಲ್ಲಿಯೂ ದೇವರನ್ನು ಪೂಜಿಸು.

೯೦ ಒತ್ತವಿಡತ್ತು ನಿತ್ತಿರೈ ಕೊಳ್.

ಸಮವಾದೆಡೆಯಲಿ ನಿದ್ರೆಯ ಮಾಡು.

ಉಬ್ಬುತಗ್ಗುಗಳಿಲ್ಲದ ಸಮಸ್ಥಲದಲ್ಲಿ ಮಲಗಿ ನಿದ್ದೆ ಮಾಡು.

೯೧. ಓದಾದಾರ್ಕ್ಕಿಲ್ಲೈ ಯುಣರ್ವೊಡು ಮೊಱುಕ್ಕಮ್.

ಓದದವರ್ಗಿಲ್ಲ ಅರಿವೂ ನಡತೆಯೂ.

ಸೂಕ್ಷ್ಮ ವಿಷಯಗಳನ್ನು ಗ್ರಹಿಸಿ ಭಾವಿಸಿಕೊಳ್ಳುವ ಶಕ್ತಿ ಮತ್ತು ಒಳ್ಳೆಯ ನಡತೆ-ಎರಡೂ ಶಾಸ್ತ್ರಜ್ಞಾನ ಇಲ್ಲದವರಲ್ಲಿ ಕಾಣುವುದಿಲ್ಲ.

ಕೊನ್ರೈ ವೇನ್ದನ್ ಮುಗಿಯಿತು.

ಱ

---

## ಸ್ವದೇಶ ವಂದನಂ

ಮೂಲ ತಮಿಳುಗೀತದ ಕವಿ: ಭಾರತಿಯಾರ್. ಅನುವಾದಕ: ಶ್ರೀ ಎಲ್. ಗುಂಡಪ್ಪ

ತಂದೆಯುಂ ತಾಯುಂ ಸಂತಸಗೊಂಡು ಹಿಗ್ಗುತ
ಬಾಳ್ದುದುಮೀ ನಾಡೇ—ಅವರ
ಹಿಂದಣರ್ ಸಾಸಿರ ವರ್ಷಗಳ್ ಬಾಳಿ
ಮಡಿದುದುಮೀ ನಾಡೇ—ಅವರ
ಚಿಂತೆಯೊಳ್ ಸಾಸಿರ ಎಣಿಕೆಗಳ್ ಬೆಳೆದು
ಮೆರೆದುದುಮೀ ನಾಡೇ—ಇದನ್
ವಂದನೆ ಹೇಳಿ ಮನದಲಿರಿಸಿಯೆನ್ನ
ಬಾಯ್ತುಂಬ ಹೊಗಳೇನೋ—ಇದನ್
ವಂದೇ ಮಾತರಂ ವಂದೇ ಮಾತರಂ
ಎಂದು ವಂದಿಸದಿಹೆನೋ !

ಇನಿಯುಸಿರಿತ್ತೆಮ್ಮ ಹೆತ್ತು ಬೆಳಸಿ ಕೃಪೆ
ಯಿತ್ತುದುಮೀ ನಾಡೇ—ನಮ್ಮ
ತಾಯ್ವಿರುಮುದಿಸಿ ತೊದಲುಲಿಗಳನಾಡಿ
ಅರಿದುದು ಮೀ ನಾಡೇ—ಅವರ್
ಕನ್ನೆಯರಾಗಿ ಬೆಳ್ದಿಂಗಳೊಳಾಡಿ
ತಣಿದುದುಮೀ ನಾಡೇ—ತಮ್ಮ
ಹೊನ್ನೊಡಲ್ ಸೊಗವೇರೆ ನೀರಾಟವಾಡಿ ಮನೆ
ಗೈದಿದುದು ಮೀ ನಾಡೇ—ಇದನ್
(ವಂದೇ ಮಾತರಂ)

ಮಡದಿಯರಾಗವರ್ ಮನೆಯರವನೊಪ್ಪಾಗಿ
ನಡೆಸಿದುದುಮೀ ನಾಡೇ—ಅವರ್
ಹೊನ್ನು ಮಗಂದಿರ ಹೆತ್ತಮರ್ದೊಡಿ
ತಬ್ಬಿದ್ದು ಮೀ ನಾಡೇ—ಜನರ್
ಉನ್ನತಿವೆತ್ತೇರಿ ಬೆಳಗೆಂದು ಗುಡಿಗಳನ್
ಬಳಸಿದ್ದು ಮೀ ನಾಡೇ—ಬಳಿಕ
ಅಲ್ಲಿ ಅವರಳಿಯೆ ಅವರೊಡಲ್ ಹೂಗಳ
ತೊಡಿಸಿದ್ದುಮೀ ನಾಡೇ—ಇದನ್
ವಂದೇ ಮಾತರಂ ವಂದೇ ಮಾತರಂ
ಎಂದು ವಂದಿಸದಿಹೆನೋ !

# ಆಧುನಿಕ ಕನ್ನಡ ಕವಿತೆ

ಶ್ರೀ: ಎಸ್. ಎಮ್. ದೇಸಾಯಿ, ಬೆಳಗಾವಿ

Freedom is the recognition of necessity—Engeles.

"ಹೊಳೆ ಬಂದು, ಹೊಳೆ ಇಳಿದು ಹೋದಂತೆ . . . . .
ಹಳೆಯ ನೀರೂ, ಹೊಸ ನೀರೂ ಬೆರೆದು ಕೊಂಡೇ ಬರುತ್ತಿರುವವು.

" . . . . . ಕನ್ನಡದ ಚಿಕ್ಕಹೆಣ್ಣು ಕುಣಿಯುವುದಕ್ಕೆ ಹೊರಟು ಅಗಾಗ್ಗೆ ತಪ್ಪು ಹೆಜ್ಜೆಗಳನ್ನು ಹಾಕುತ್ತಿದ್ದಳು."

ಶ್ರೀ ಬಿ. ಎಂ. ಶ್ರೀಕಂಠಯ್ಯನವರು

೧

ಆಧುನಿಕ ಕನ್ನಡ ಕವಿತೆಯ ಹುಟ್ಟು ಮೊದಲು ಎಂದಾಯಿತು ಎಂದು ಕೇಳಿದರೆ ತಟ್ಟನೆ ಹೇಳುವದು ಅಷ್ಟೇನೂ ಕಷ್ಟದ ಮಾತಲ್ಲ. ಹತ್ತೊಂಬತ್ತನೆಯ ಶತಮಾನವನ್ನು ನವೀನ ಕಾಲವೆಂದು ಕನ್ನಡ ಸಾಹಿತ್ಯ ಚರಿತ್ರೆಯ ಕರ್ತೃಗಳಾದ ದಿವಂಗತ ಬಿ. ಎಂ. ಶ್ರೀಕಂಠಯ್ಯನವರು ಒಪ್ಪಿದ್ದಾರೆ. ಈ ಹೊಸ ಕಾಲದಲ್ಲಿ ಹೊಸ ಗದ್ಯ ಅದೆ ತಾನೆ ಕಣ್ಣು ಬಿಟ್ಟಿತು; ಅಲ್ಲೊಂದು ಮೊಗ್ಗು; ಇಲ್ಲೊಂದು ಮಿಡಿ, ಕಾಯಿ ತಲೆಯೆತ್ತಿತು. ಕಾಲಕ್ರಮದಲ್ಲಿ, ಕವಿಚರಿತೆಯ ಮೂರನೆಯ ಭಾಗದ ಪುಟಗಳನ್ನು ತಿರುವಿಹಾಕಿ ಹೊಸ ಗದ್ಯ-ಪದ್ಯವನ್ನು ಅಳೆಯುವ ಸ್ಥಿತಿಯಲ್ಲಿ ನಾವಿಂದು ಇರುವದಿಲ್ಲ. ನಡುಗನ್ನಡದ ಕಾಲವೇ ಹತ್ತೊಂಬತ್ತನೆಯ ಶತಮಾನದ ಶರೀರನ್ನಾವರಿಸಿತು; ಕೆಲವರು ಮುದ್ದಣನನ್ನು ಹೊಸಗನ್ನಡದ ಹೆಗ್ಗಡೆಯೆಂದು ಕರೆದದ್ದು ಉಂಟು; ಭಾವಿಸಿದ್ದೂ ಉಂಟು. "ರಾಮಾಶ್ವಮೇಧ"ದ ಮಾತು ಹಳಗನ್ನಡವಾದರೂ ಭಾವ ಹೊಸಗನ್ನಡ; ಅಚ್ಚ ಹೊಸಗನ್ನಡವೇ. "ಭರತೇಶ ವೈಭವ"ದ ಹೊಸ ರೀತಿ ಇಂದಿನವವರಿಗೂ ನಿಪ್ಪೊಸತು ಎನಿಸುವಂತಿದೆ" ಎಂದು ಪ್ರೊ|| ಬೇಂದ್ರೆ ಒಂದು ಕಡೆ ಬರೆದಿದ್ದಾರೆ. ಮಾತು ಹಳಗನ್ನಡವಾಗಿ, ಕಟ್ಟಡ ಹಳಗನ್ನಡವಾಗಿ, ವಿಷಯವಸ್ತು ಹಳೆಯದಿರಲು ಭಾವವೂ ಹೊಸಗನ್ನಡದಲ್ಲಿ ಬರಲಾರದು. ನನ್ನ ನಮ್ರ ಅಭಿಪ್ರಾಯದಲ್ಲಿ ಮುದ್ದಣನ ಸವಿಗನ್ನಡವನ್ನು ನಡುಗನ್ನಡಕ್ಕೆ ಕೊನೆಗೊನೆಯೆಂದೂ, ಪ್ರೌಢಶೈಲಿಯ ಉತ್ತಮ ಕೃತಿಯೆಂದೂ ಪರಿಗಣಿಸಲೇಬೇಕು. ಇದಕ್ಕೆ ಆಧಾರವಾಗಿ ದಿವಂಗತ ಬಿ. ಎಂ. ಶ್ರೀಯವರ ಇನ್ನೊಂದು ಆಧಾರ ವಾಕ್ಯವು ನನ್ನ ನೆನಪಿಗೆ ಬಂದು ನಿಲ್ಲುವದು.

"ಪ್ರೌಢಕವಿಗಳು ಜೈನಕವಿಗಳ ಸಮಾನ ಗೌರವಕ್ಕೆ ಪಾತ್ರವಾಗಬೇಕೆಂದು ಅವರ ಕ್ರಮವನ್ನೆ ಹಿಡಿದರು. ಇದು ಸತ್ಯವಾದದ್ದು. ನಡುಗನ್ನಡ ಕಾಲದ ರುದ್ರಭಟ್ಟ ಷಡಕ್ಷರಿಗಳ ಚಂಪೂಶೈಲಿ, ಚಿಕ್ಕದೇವರಾಯ — ಮುದ್ದಣರ ಹಳೆ ಕಾವ್ಯಶೈಲಿಯ ಸಾಕ್ಷಿ. ಶ್ರೀಯವರ "ಅಶ್ವತ್ಥಾಮನ್"— "ಪಾರಸಿಕರು" ಕೃತಿಗಳ ಹಳಗನ್ನಡ ಮಂಜುಳ ಶೈಲಿಯೂ, ಆಧುನಿಕ ವರಕವಿಯೊಬ್ಬರಾದ "ಕುವೆಂಪು"ರವರ ಮಹಾರಗಳೆಯ ಛಂದೋವೈಭವವೂ ನಮಗಾಗಿ ಮೇಲಿನ ದೃಷ್ಟಿಯನ್ನು ಪುಷ್ಟೀಕರಿಸುತ್ತಿವೆ.

ಹತ್ತೊಂಬತ್ತನೆಯ ಶತಕದಲ್ಲಿ ಅಲ್ಲಿಷ್ಟು, ಇಲ್ಲಿಷ್ಟು ಹೊಸಗದ್ಯವು ಹಳೆಯ ಸಂಸ್ಕಾರ ಬಿಟ್ಟು ಅರಳಿಕೊಂಡಿದ್ದರೂ, ಹೊಸ ಕಾವ್ಯ ಮಾತ್ರ ಇಪ್ಪತ್ತನೆಯ ಶತಕದಾವರಣದಲ್ಲೆ ಹುಟ್ಟಿಕೊಂಡಿದ್ದು ನಿಸ್ಸಂದೇಹ; ಗದ್ಯದಲ್ಲಿ "ಮುದ್ರಾಮಂಜೂಷ"ವು ಹೇಗೆ ಒಳ್ಳೆಯ ಮೊದಲ ಕೃತಿಯೊ, ಹಾಗೆಯೆ ಕೆಲಹಿರಿಯರ ಒಳ್ಳೇ ಕವನಗಳು ಹೊಸಗಾಲದ ರೆಕ್ಕೆಗಳಾದವು. ಶ್ರೀಯವರ "ಭರತಮಾತೆ" ೧೯೧೪ಕ್ಕೆ ಬಂತು ಎಂದು ಕವಿ ಬೇಂದ್ರೆ ಬರೆದಿದ್ದಾರೆ. "ಇಂಗ್ಲೀಷ್ ಗೀತಗಳ" ಕೆಲ ಕವನಗಳು ಮಂಗಳೂರಿನ "ಸುವಾಸಿನಿ"ಯಲ್ಲಿ ಪ್ರಕಟವಾಗಿದ್ದವಂತೆ. ಮಂಗಳೂರಿನ ಹಿರಿಯರಾದ ಗೋವಿಂದ ಪೈಗಳ "ಕವಿತಾವತಾರ" ಮೊದಲಾದ ಸುನೀತಗಳು ಇದೇ ಸಮಯಕ್ಕೆ ಅಚ್ಚಾದ ಹಾಗೆ "ಪ್ರಭಾತ"ದ ವಿಶೇಷ ಸಂಚಿಕೆಯಲ್ಲಿ ಓದಿದ್ದೇನೆ. ೨೦ನೇ ಶತಕದ ಆದಿಯಲ್ಲಿ, ಎರಡನೆ ಮಹಾಯುದ್ಧದ ಪೂರ್ವದಲ್ಲಿ, ನಮ್ಮವರ ಸಿದ್ಧಹಸ್ತದಿಂದ ಹೊಸ ಕವಿತೆಯ ಹೂವುಗಳು ಅರಳಿಬಿಟ್ಟವು. ಇದೇ ಕಾಲಕ್ಕೆ ಇನ್ನೊಬ್ಬ ಹಿರಿಯ ಸಾಹಿತಿ, 'ಕವಿಶಿಷ್ಯ'ರಾದ ಪಂಜೆಯವರ "ಡೊಂಬರ

ಚಿನ್ನ"; "ಕಡೆಗಂಜಿ"; "ಹುತ್ತರಿ ಹಾಡು"; "ತೆಂಕಣಗಾಳಿ"— "ನಾಗರ ಹಾವೆ, ಹಾವೊಳು ಹೂವೆ" ಬಂದವು. ಇವುಗಳ ನಿಶ್ಚಿತ ಇಸವಿ ತಾರೀಖನ್ನು ತದನಂತರ ಜಿಜ್ಞಾಸುಗಳು ಗೊತ್ತುಹಚ್ಚಿಕೊಳ್ಳಬಹುದು. ಹೊಸ ಕವಿತೆಯ ನಿಶ್ಚಿತರೂಪು ಹೊರ ಬಂತು; ಹೊಸಬೆಳೆ ಚಿಗುರುತ್ತ ಬಂತು: ಶಾಂತಕವಿಗಳ "ರಕ್ಷಿಸು ಕರ್ನಾಟಕದೇವಿ" ಮತ್ತು "ಉದಯವಾಗಲಿ ಚೆಲುವ ಕನ್ನಡ ನಾಡು" ಪದ್ಯಗಳು ಇದೇ ಕಾಲದ **ಕರುಳಿನ ಕೂಗುಗಳು.**

ತೆಂಕಣಗಾಳಿಯಾ ತೆಂಕಣ ಸೀಮೆಗೆ
ಬಂತೈ ಬೀಸುತ! ಬೀಸುತ ಬಂತೈ!
. . . . . . . . . . . . . . . .

"ಎಲ್ಲಿ ಭೂರಮೆ ದೇವ ಸನ್ನಿಧಿ ಬಯಸಿ ಬಿನ್ನಾಣೆ ಬಂದಳೋ!
ಎಲ್ಲಿ ಮೋಹನ ಗಿರಿಯ ಬೆರಗಿನ ರೂಪಿನಿಂದಲಿ ನಿಂದಳೋ!
ಎಲ್ಲಿ ಮುಗಿಲಲಿ ಮಿಂಚಿನೊಲ್ ಕಾವೇರಿ ಹೊಳೆ ಹೊಳೆ ಹೊಳೆವಳೋ?
ಎಲ್ಲಿ ನೆಲವನು ತಣಿಸಿ ಜನಮನ ಹೊಲದ ಕಳೆ ಕಳೆಕಳೆವಳೋ?
(ಕವಿಶಿಷ್ಯ)

ಶ್ರೀ ಪಂಜೆಯವರ ಈ ಪ್ರಾತಿನಿಧಿಕ ಧ್ವನಿಯು ಹೊಸಗವನದ ಉದಯರಾಗವಾಗಬಲ್ಲುದು. ಹಿಂದಣ ಸಾಹಿತ್ಯದ ಕಾವೇರಿ ಕುರಿತು ಶ್ರೀಯವರು—"ಮೂರು ಬಣ್ಣದ ನೀರುಳ್ಳ ದೊಡ್ಡ ಹೊಳೆಯಾಗಿದೆ" ಎಂದರು. ಆ ದೊಡ್ಡ ಹೊಳೆ ಬತ್ತದೆ, ಕವಿಶಿಷ್ಯನ ಕಂಠದಲ್ಲಿ ಜಿನುಗಿತು. ಅಚ್ಚಾಗಿ ಬಂದಮೇಲೆ ಹೊಸ ಕವಿಗಳು, ಎಳೆಯರು, ಕಿರಿಯರು, ಇನ್ನೂ ಹಸುಳೆಗಳೂ ಕೂಡ ಹೊಸ ಸವಿಯ, ರುಚಿಯ ಅಮೃತವನ್ನು ಕುಡಿದರು; ಕುಡಿದು ತಣಿದರು; ತಣಿಯುವಾಗ ಕೆಲವರು ಕವಿಗಳಾದರು. ಈ ಹುಚ್ಚುತೊರೆಯು ಇಂಗ್ಲೀಷಿನ ಕಾವ್ಯ ಸಾಹಿತ್ಯಗಳ ಆಳವಾದ ವ್ಯಾಸಂಗದಿಂದ ದಿನವೊಂದಕ್ಕೂ ಅಭಿವೃದ್ಧಿಗೊಳ್ಳುತ್ತ, ಹೊಸಗಾಲದ ಮನಗಳನ್ನು ಚೇತರಿಸುತ್ತ, ಬಂತು. ಅರ್ಧಶತಕವೂ ದಾಟಬಂದುಬಿಟ್ಟಿತು.

ಈ ಹೊಸ ಕಾವ್ಯದ ಮೊಳಕೆಗಳು ವಂಗಬಂಧುಗಳಲ್ಲಿಯೂ ಮೊಟ್ಟ ಮೊದಲು ಕಂಡಿರಬೇಕು. ಆಮೇಲೆ ಇತರ ಪ್ರಾಂತೀಯ ನೆಲ ಹೊಲಗಳಲ್ಲಿ ಎದ್ದುಬಿಟ್ಟವು. ನೋಡುವದಕ್ಕೆ ಇಂಗ್ಲೀಷಿನ ಛಾಯಾ ಪ್ರಭಾವ ಇದ್ದೇ ಇದೆ; ಹೊಸ ಲಕ್ಷಣಗಳಲ್ಲಿ ಸ್ವಾತಂತ್ರ್ಯಾಭಿಲಾಷೆ, ಛಂದೋಗತಿಗಳಲ್ಲಿ ಹೊಸ ಲಯ, ಬಿಗಿ, ದೋರಣೆಗಳೂ — ಹೊಸಭಾವ ಕಲ್ಪನಾವಿಲಾಸಗಳೂ ಮುಖ್ಯವಾಗಿವೆ. ಷಟ್ಪದಿ, ರಗಳೆಗಳ ನುಡಿಗಟ್ಟೆ ಹೊಸ ನಡಿಗೆಗೆ ತಳಪಾಯವಾಗಿ ಉಳಿಯಿತು. ಅಂತು ಸ್ಪಷ್ಟವಾಗಿ ದೃಷ್ಟಿ ಗತಿ, ಅನುಭವ ಬೇರೆಯಾಯಿತು. ಹೊಸಬರಾದವರು, ಡಿ. ವಿ. ಜಿ.ಯವರ ಉಕ್ತಿಯಂತೆ:

"ಕಾವ್ಯಕ್ರಿಯೆ ಒಂದು ರಹಸ್ಯ"ವೆಂಬುದನ್ನು ಮರೆಯಲಿಲ್ಲ ಇನ್ನೊಬ್ಬ ಆಧುನಿಕ ಕವಿ ಶ್ರೀನಿವಾಸ ಪ್ರಶ್ನಿಸುವಂತೆ, . . . . . . .

"ಚೆಲುವು ಹಿರಿಯದೊ? ಹೃದಯದೊಲವು ಹಿರಿಯದೊ"
"ಅಂಗಳದಲ್ಲಿಯ ಹೀರೆಯ ಹೂವೇ
ನಿನ್ನನೆ ನೋಡುವೆನು;
ಹಳದಿಯ ನುಟ್ಟಿಹ ನಿನ್ನನು ಕುರಿತೇ
ಗೀತೆಯ ಹಾಡುವೆನು.

ಒಬ್ಬನ ಪ್ರಶ್ನೆಗೆ ಇನ್ನೊಬ್ಬ ಕವಿ 'ಕಿಶೋರಚಂದ್ರವಾಣಿ'ಯವಾಣಿ ಬಂತು. "ಕುವೆಂಪು"ರವರ ಮೊದಲಿನ ಹೃದಯದ ಕವಿತೆ, ಶುದ್ಧಕವಿತೆಯು ಇದಕ್ಕಿಂತ ಬೇರೊಂದಿಲ್ಲವೆಂದು ಧೈರ್ಯವಾಗಿ ಹೇಳುತ್ತೇನೆ.

ಇರುಳಿರುಳಳಿದೂ ದಿನದಿನ ಬೆಳಗೆ
ಸುತ್ತ ಮುತ್ತಲೂ ಮೇಲಕೆ ಕೆಳಗೆ
ಗಾವುದ ಗಾವುದ ಗಾವುದ ಮುಂದೆ
ಎವೆತೆರದಿಕ್ಕುವ ಹೊತ್ತಿನ ಒಳಗೆ
ಹಕ್ಕಿಹಾರುತಿದೆ ನೋಡಿದಿರಾ?

ಇನ್ನೊಬ್ಬ ಮಹಾಕವಿಯು ೧೯೩೯ರ ಬೆಳಗಾವಿ ಸಾಹಿತ್ಯ ಸಮ್ಮೇಳನದ ಕಾಲಕ್ಕೆ ಶ್ರೀ ಶ್ರೀನಿವಾಸರ ಸಮ್ಮುಖದಲ್ಲಿ ಒಬ್ಬ ಗೌಡನಂತೆ ರುಮಾಲು ಸುತ್ತಿಕೊಂಡು, ಮೇಲಿನ ಹೊಸ ರಸಧ್ವನಿಯ ಹಾಡನ್ನು ಹಾಡಿದನು.

ಅಂತು ಹೊಸಕಾಲದ ಹೊಸ ಹಕ್ಕಿ ಹಾರಿದ್ದನ್ನು ನೋಡಿದೆವು ಇಂಥ ಹೊಸ ಹಕ್ಕಿ ಹಾರುವಾಗ ಹೊಸ ಕವಿಯೊಬ್ಬನು ಎದೆದುಂಬಿ ಹಾಡಿ ನೂರಾರು ರಸಿಕರನ್ನು ತಣಿಸಿದನು. ಹೊಸ ಕವಿತೆಯು ಇಂದು 'ಕುವೆಂಪು'ವಿನ ವಾಣಿಯಲ್ಲಿ,

"ಹಾಲು, ಹೂವು, ಜೊನ್ನ ಜೇನು
ಎಲ್ಲ ಸೇರಿಯದೆ ನೀನು.

ಎನ್ನುವಷ್ಟು ಸಾರ್ಥಕ್ಯ ಪಡೆದಿದೆ; ಹೊಸಗಣ್ಣು ಮೂಡಿದೆ. ರಾಘವಾಂಕನು ಹೇಳುವ "ವಿಾಸಲು ಗವಿತೆ"ಗೂ, ಆಂಗ್ಲವಿಮರ್ಶಕರು ಹೇಳುವ ಶುದ್ಧ ಕವಿತೆಗೂ ಬಹಳ ಹೋಲಿಕೆಯಿದೆ. ಅಂದು ಹರೀಶ್ವರನ ಮಾನವವ್ಯಕ್ತಿರೂಪದ ರಗಳೆಗಳೂ, ರತ್ನಾಕರನ ಭರತೇಶ ವೈಭವ ಕಾವ್ಯವೂ, ಗದುಗಿನ ನಾರಣಪ್ಪನ ಮಹಾಭಾರತವೂ ಅಚ್ಚುಮೆಚ್ಚಿನ ವಿಾಸಲು ಕವಿತೆಗಳು.

ಇಪ್ಪತ್ತನೆಯ ಅರ್ಧಶತಕದಲ್ಲಿ ಹುಟ್ಟಿದ ಒಂದೇ ಒಂದು ವಿಶಾಸಲುಕವಿತೆಯೆಂದರೆ— ಡಿ. ವಿ. ಗುಂಡಪ್ಪನವರ "ಮಂಕುತಿಮ್ಮನ ಕಗ್ಗ". ಇದು ಹದಿನಾರಾಣೆ ಆಧುನಿಕವಿದೆ. ರಸಸಿದ್ಧಿಯಲ್ಲಿ ವಿಶ್ವಧರ್ಮದ ವಿಶ್ವವೃಕ್ಷಕ್ಕೆ ಆತುಕೊಂಡಿದ್ದರೂ, ಸಾಮಾನ್ಯನ ಜೀವನವನ್ನು ಮಧುರ ಮಯವಾಗಿ ಮಾಡಿದೆ :

"ಸಾಮಾನ್ಯತಾ ಸುಖವೆ ಶಾಂತಿ ಜೀವಾಧಾರ ;
ಸಾಮಾನ್ಯತೆಯೆ ಜಗತ್ ಮಾನ್ಯತಾ ಸಂಸಾರ !"
(ಕುವೆಂಪು)

ಎಂಬ ಕಾವ್ಯತತ್ವವನ್ನು "ಮನುಷ್ಯತೆಯ ಜೀವಾಳ ಮನಸ್ಸು" ಎಂಬುದನ್ನೂ ಈ ಒಳ್ಳೆ ಕೃತಿ ಬಿಡಿಬಿಡಿಯಾಗಿ ತೋರಿಸುವದು. "ಕುವೆಂಪು"ರವರ "ರಾಮಾಯಣ ದರ್ಶನಮ್" ಮಹಾಕಾವ್ಯವು ಅಭಿಜಾತ ಪರಂಪರೆಯಲ್ಲಿ, ಮಹಾ ರಗಳೆಯ ಛಂದಸ್ಸಿನಲ್ಲಿ ಒಂದು ಮಹಾಜೀವಿಯ, ತಪಸ್ಸಿನ ಫಲವಾಗಿ ಹುಟ್ಟಬಂದಿದ್ದರೂ ಆಧುನಿಕ ಕಾವ್ಯವಲ್ಲ; ಆಧುನಿಕ ಜೀವಿಯ, ಇಪ್ಪತ್ತನೆಯ ಶತಕದ ಕರುಳಿನ ಶಿಶುವಿನ ರನ್ನಗನ್ನಡಿಯಲ್ಲಿ ಸಮಗ್ರಸಮುದಾಯ ರುಚಿಯ ಸರ್ವರ ಕವಳಲ್ಲ; ಪಂಪ, ಮಿಲ್ಟನ್, ಡಾಂಟೆ, ವ್ಹರ್ಜಿಲರು ಬರೆದ ಮಹಾಕಾವ್ಯಗಳ ಜಾತಿಗೆ ಪ್ರೊ : ಪುಟ್ಟಪ್ಪನವರ ಮಹಾಕಾವ್ಯ ಸೇರುವದು. ಪಂಪನಲ್ಲಿಯ ಕಾವ್ಯಗುಣಗಳನ್ನು ಹುಡುಕಿಕೊಂಡು ಸವಿಯಬೇಕಾದಂತೆ, ಕುವೆಂಪುರವರ ಕಾವ್ಯಕೃತಿಯ ಅಕ್ಷಯಶಬ್ದ ಸಂಪತ್ತಿಯಿಂದ, ಛಂದೋವೈಭವದಿಂದ, ಹೃದಯಾಂತರಾಳದ ಗಣಿಗಳಿಂದ.... ರಸಸುಖವನ್ನು, ಕಲಾನಂದವನ್ನು ನಾವು ಪಡೆಯಬೇಕು.

"ಮನುಷ್ಯ ಜಾತಿ ತಾನೊಂದೆ ವಲಂ"—ಪಂಪ.

"Nothing is more wonderful than
Man —Sophocles.
(ಮನುಷ್ಯನಕಿಂತ ಇನ್ನೇನೂ ಆಶ್ಚರ್ಯಕಾರಕವಾದದ್ದಿಲ್ಲ.)

ಪಂಪನ ಬಾಹುಬಲಿ, ಅಭಿನವಪಂಪನ ರಾವಣ, ರನ್ನನ ದುರ್ಯೋಧನ, ಕುಮಾರವ್ಯಾಸನ ಕರ್ಣ ಮತ್ತು ಶ್ರೀ ಕೃಷ್ಣ, ಹರಿಹರನ ಬಸವಣ್ಣ ಮತ್ತು ಮಹಾದೇವಿ; ಚಾಮರಸನ ಅಲ್ಲಮಪ್ರಭು , ರಾಘವಾಂಕನ ಹರಿಶ್ಚಂದ್ರ ಮತ್ತು ಸಿದ್ಧರಾಮರು ; ಜನ್ನನ ಯಶೋಧರ ಮತ್ತು ಸೋಫೋಕ್ಲೀಸನ ಅಂತಿಗೊನೆ, ಈಡಿಪಸ್ ಮತ್ತು ಪ್ರೋಥಿಯಸ್, ಗೊಯೆತೆಯ ಫಾಸ್ಟ್ ; ಈಟ್ಸನ ಹೊಸ ಈಡಿಪಸ್ ; ಶ್ರೀಯವರ "ಅಶ್ವತ್ಥಾಮನ್" ಮತ್ತು ಕೆ. ವಿ. ರಾಘವಾಚಾರ್ಯರ "ಅಂತಿಗೊನೆ" ಮತ್ತು ಪು. ತಿ. ನರಸಿಂಹಾಚಾರ್ಯರ "ಅಹಲ್ಯೆ" ಮುಂತಾದವು ಏನನ್ನು ಘೋಷಿಸುತ್ತಿವೆ? ಯಾರ ಸಂದೇಶ ನೀಡುತ್ತಿವೆ?

"ಓ ! ಪೊಲ್ಲ ಯುದ್ಧಮೇ"
ಎಂದು ಸಿಲ್ವಯರ್
ಓ ! ತಾಯೆ ಶಾಂತಿಯೇ
ಎಂದು ಗೆಲ್ವಯರ್ —(ಶ್ರೀ: ಅಶ್ವತ್ಥಾಮನ್)

"ಈ ಬಾಳಿಂದು ಸಾವುದು ಸುಖಮೇ,
ಮತಿ ಪಾಳಾಗಲ್ ಸಾವುದು ಸುಖಮೇ
(ಅಶ್ವತ್ಥಾಮನ್.)

"ಎಚ್ಚರೆಚ್ಚರು ಮಾರ ಮೂಜಗದ ಸಿಂಗಾರ !
...... ಮನಮನದ ಬಂಗಾರ !
ಎಚ್ಚರೈ ಇಳ್ಳೆ !
(ಅಹಲ್ಯೆ)

ಮೇಲಿನ ಕವಿನುಡಿಗಳು ಮಾನವನ ದಿಗ್ವಿಜಯಕ್ಕಿಂತ, ಆತನ ಒಳದೋಟೆಯನ್ನೂ, ಒಳಸಂಕಟವನ್ನೂ, ಒಳಶಾಂತಿಯನ್ನೂ ತೋರುತ್ತಿವೆ; ನಮ್ಮ ಮುದ್ದು ಕವಿರಾಯ ಪುಟ್ಟಪ್ಪನವರಿಗೆ ರಾಮಾಯಣ ದರ್ಶನವೇ ಕಾವ್ಯವಾಗಿ ಹೊರಹೊಮ್ಮಿತು. ಈ ಹಳೇ ಶೈಲಿಯ ಕಾವ್ಯ ಶಾಂತಿ–ತಂತು. ಕುವೆಂಪುರವರ ಇನ್ನೊಂದು ಮಹಾದೃಷ್ಟಿಯ ತುದಿಮಾತೊಂದನು ಗಮನಿಸೋಣ. ಕವಿ ಬೇಂದ್ರೆಯವರು ೧೯೪೩ರಲ್ಲಿ "ಗಂಗಾವತರಣದ"ದಲ್ಲಿ "ಇಳಿದು ಬಾ ತಾಯಿ" ಎಂಬ "ಇನಿಗವನವನ್ನು ಹಾಡಿದರು ; ಇದರಂತೆಯೇ ಪುಟ್ಟಪ್ಪ ಕವಿಗಳೂ ಸಮಾನಕಾಲದಲ್ಲಿಯೆ, ಸಮಾನಂತರದ ಭಾವವೈಖರಿಯಲ್ಲಿಯೆ ಹೀಗೆ ಎದೆದುಂಬಿ ನುಡಿದರು:

"ಇಳಿದು ಬಾ ಇಳೆಗೆ, ತುಂಬಿ ತಾ ಬೆಳಗೆ ಜೀವಕೇಂದ್ರದಲ್ಲಿ !
ಮತ್ತೆ ಮೂಡಿ ಬಾ ಒತ್ತಿ ನೀನೆನ್ನ ಚಿತ್ತಪೃಥಿವಿಯಲ್ಲಿ,
(ಅಗ್ನಿಹಂಸ)

ಇಬ್ಬರು ಕಬ್ಬಿಗರು ಜಗನ್ಮಾತೆಯನ್ನು ಕರೆಕರೆದು ಪೊರೆಯೆಂದು ಹಾಡಿದ್ದಾರೆ; ಈ ಜಗನ್ಮಾತೆಯನ್ನು ಕಾವ್ಯಗರ್ಭದಿಂದ ಈ ಭೂಮಿಗೆ ಇಳಿಸಿಬಿಟ್ಟಿದ್ದಾರೆ.

..."ಕೊಲುವೆ ಕಾವೆಯೋದಿ;....
"ತೇರನೇರು ಇಂದೆ........"
ಪುಟ್ಟಪ್ಪನವರ ಅಮೃತ ವಾಕ್ಯಗಳು.

ಈ ಕವಿಗಳ ವಾಗ್ದೃಷ್ಟಿಯು ಗೊಯತೆ ಮಹಾಗುರುವಿನ ಶಾಶ್ವತ ಸ್ತ್ರೀಶಕ್ತಿಯ ವರಪೂಜೆಗೆ ಸಮಾನವಾಗಿದೆ; ಡಾಂಟೆ ಕವಿಗುರುವೂ ಪ್ರೇಮಶಕ್ತಿಯ ಅನಾದಿಮೂರ್ತಿಯನ್ನು ತನ್ನೊಳಗೆ ಅನೇಕಸಲ ಮೂರ್ತೀಭವಿಸಿಕೊಂಡನು ; ಶೈಲಿಯೂ ಇದೇ ರಸಪಂಥಿ.

"ಹಾಲು ಸಕ್ಕರೆ ಸೇರಿ ನೀವಾದಿರಾಚಾರ್ಯ . . . .
. . . . . . . . . . . . . . . . .
ಬಾಳ್ಪಂಡಿ ನೊಗಕೆ ಹೆಗಲಿತ್ತವರು ನೀವಲ್ಲ;
ತೇರ್ಮಿಣಿಯನೆಳೆದಿರಲ್ಲದೆ ಮತ್ತೆ ಮಣಿದಿಲ್ಲ!

ಎಂದು ಶ್ರೀ ಪಂಜೆಯವರನ್ನು ನೆನೆದು ಕುವೆಂಪು ಬರೆದದ್ದೂ,

"ಬಳೆಯಿಸುವ ವೆಂಕಯ್ಯ ಕಂಠಯ್ಯ ಕಸ್ತೂರಿ
ಶ್ರೀನಿವಾಸರು ಮೆಚ್ಚಿದರು ಸಾಕೆನೆಗೆ ತೃಪ್ತಿ
ನನ್ನ ಕನ್ನಡ ಕವನಗಳ ಯಶಸ್ಸಿನ ವ್ಯಾಪ್ತಿ"

ಎಂದು ಬರೆದದ್ದೂ ಕವಿಯ ತಿಳಿ ಮನಸ್ಸನ್ನು ಮುಂದಿಡುತ್ತದೆ.

"ದಿವ್ಯನಿರ್ಲಕ್ಷತೆಯೆ ವರಕವಿಯ ಪಂಥ" ಎಂಬ ಗಮ್ಯಗುರಿಯ ಕವಿಯೀತ; "ಕವಿ ಹೃದಯದಿ ಮೋಹನ ಸುರಗಾನದ ಮಳೆಗರೆವುದು ಸುಮ್ಮಾನದಲಿ"— "ಮುಂಗಾರು" ಕವಿತೆ ನುಡಿಸಿದ, ಮಿಡಿಸಿದ ಕೊನೆ ನುಡಿಯಿದು.

ಕುವೆಂಪುರವರನ್ನು ನಿರ್ವಿವಾದವಾಗಿ ಮಲೆನಾಡ ಕವಿಯೆನ್ನಬಹುದು.

"ಹೋಗುವೆನು ನಾ ಹೋಗುವೆನು ನಾ ನನ್ನ ಒಲುಮೆಯ ಗೂಡಿಗೆ;
ಮನೆಯ ನಾಡಿಗೆ, ಮಳೆಯ ಬೀಡಿಗೆ, ಸಿರಿಯ ಚೆಲುವಿನ ರೂಢಿಗೆ.
ಬೇಸರಾಗಿದೆ ಬಯಲು, ಹೋಗುವೆ ಮನೆಯ ಕಣಿವೆಯ ಕಾಡಿಗೆ;
ಹಸುರು ಸೋಂಪಿನ ಬಿಸಿಲು ತಂಪಿನ ಗಾನದಿಂಪಿನ ಗೂಡಿಗೆ!

ಮುಕ್ತಕಂಠನಾಗಿ ಬೇಸರದೆ ಮಲೆನಾಡನ್ನು ಆಶ್ರಯಿಸಿ, ಮಲೆನಾಡ ಪ್ರೇರಣೆಯಿಂದ ಹಾಡು ಹಾಡಿರುವ ಈ ಕವಿ :

"ಕಾಲದಾಚೆಗೆ, ದೇಶದಾಚೆಗೆ, ಚಿಂತೆಯಾಚೆಗೆ ಹಾರುವೆ,
ಕಾವ್ಯಕನ್ಯಾ ಶ್ರಾವ್ಯಕಂಠದೊಳಾತ್ಮ ಭೂತಿಯ ಸಾರುವೆ!

ಎಂಬ ನಿಲುಕಡೆಗೆ ಬಿಂದುಬಿಡುವನು; ಕವಿಯ ಅನುಭೂತಿ, ಪ್ರೀತಿ ತುಂಬಿ ತುಳುಕಾಡುವದು.

ಮುಂಬರುವ ಲೇಖನಗಳಲ್ಲಿ, ದಿವಂಗತ ಪಂಜೆ ಶ್ರೀಯವರು ಮತ್ತು ಮಂ. ಗೋವಿಂದ ಪೈಗಳು; ಡಿ. ವಿ. ಜಿ. ಶ್ರೀನಿವಾಸ ಮತ್ತು ಕುವೆಂಪು; ಬೇಂದ್ರೆ ಕಡೆಂಗೊಡ್ಲು ಶಂಕರಭಟ್ಟ ಮತ್ತು ವಿ. ಸೀ. ಪು. ತಿ. ನರಸಿಂಹಾಚಾರ್ಯ; ರಾಜರತ್ನಂ ಮತ್ತು ಕೆ. ಎಸ್. ನರಸಿಂಹಸ್ವಾಮಿ ಹೀಗೆ ಹನ್ನೆರಡು ಕವಿಗಳ ವಿಚಾರವನ್ನು ಸದ್ಯಕ್ಕೆ ಪರ್ಯಾಲೋಚಿಸಲು ಪ್ರಯತ್ನಪಡುತ್ತೇನೆ. ಇವರ ಪ್ರಮುಖ ಕವಿತೆಗಳು ಸಮಸ್ತ ಕನ್ನಡ ಕುಲರಸಿಕರ ಬಾಯಲ್ಲಿ ಈಗತಾನೆ ಓಡಾಡುತ್ತಿವೆ. ಈ ಮೊದಲ ಲೇಖನದಲ್ಲಿಯೆ ಸಂಕ್ಷೇಪವಾಗಿ ಈ ಕವಿತೆಗಳನ್ನೆ ಹೆಗ್ಗುರುತಾಗಿ ಗಮನದಲ್ಲಿಟ್ಟುಕೊಂಡು ಸಾಗತಕ್ಕವನಿರುವೆನು. ಈ ಕವಿತೆಯನ್ನು ವಿಂಗಡಿಸಿಕೊಳ್ಳುವಲ್ಲಿ ಮಿಕ್ಕ ಕವಿತೆಗಳು ಜೊಳ್ಳೆಂದೊ, ಪೊಳ್ಳೆಂದೊ ಈ ಸಾಮಾನ್ಯ ವಿಮರ್ಶಕನು ಭಾವಿಸಿಕೊಂಡಿರುವದಿಲ್ಲ. ಈ ಕವಿತೆಗಳ ಲೋಕಪ್ರಿಯತೆಯೆ ಜೊತೆಗೆ ಇರಬೇಕಾದ ಮಾನವೀ ಬೆಲೆಯನ್ನು ಲಕ್ಷ್ಯದಲ್ಲಿಟ್ಟುಕೊಳ್ಳಲಾಗಿದೆ. ಆಯಾ ಕವಿತೆಯು ಗ್ರೀಕ್ ಅಥವ ಸಂಸ್ಕೃತ ಮಾರ್ಗದಿಂದ ಬಂದಿರಲಿ; ಆಂಗ್ಲಪಂಥ, ಪ್ರಭಾವದಲ್ಲಿ ಬೆಳೆದು ಬಂದಿರಲಿ; ಜನಪದದ ಬಾಯ ಬಳಕೆಯ ಚುಟಿಕೆಯ ಪ್ರೇರಣಾಂಶವುಳ್ಳದ್ದಾಗಿರಲಿ; ಆ ಕವಿತೆಯು ಕವಿಯ ಸೃಷ್ಟಿಯಲ್ಲಿ ಸರ್ವಕಾಲ ಬದುಕುವ ಶಕ್ತಿ, ಯೋಗ್ಯತೆಯುಳ್ಳದ್ದಾಗಿರಬೇಕು. ಇದೊಂದೇ ಅತಿಮುಖ್ಯ. ಕವಿತೆಯ ಪೈರು, ತೆನೆಗಳನ್ನು ಕವಿಯ ಮನೋಧೈರ್ಯದ ಹಿನ್ನೆಲೆಯಲ್ಲಿಯೆ, ಲೌಕಿಕ ಆವರಣದಲ್ಲಿಯೆ ನಾವಿಂದು ಅಳೆಯಬೇಕಾಗುವದು.

"ಅರಸಿನ ಕುಲವೋ ಏನಿದ್ದೇನು!
ಸುರಮಧು ರೂಪೋ ಏನಿದ್ದೇನು!
ಗುಣವೋ ಸೊಬಗೋ ಏನಿದ್ದೇನು!
ಪದುಮಾ, ಇದ್ದುವು ನಿನಗೆಲ್ಲಾ"

(ಇಂಗ್ಲಿಷ್ ಗೀತೆಗಳು)

ಇದು ಶುದ್ಧ ಕವಿತೆ; . . . . ಸಹಜ ಕವಿತೆ.

೧. ಪಂಜೆಯವರ ನಾಗರಹಾವೆ, ತೆಂಕಣಗಾಳಿ, ಹುತ್ತರಿಹಾಡು ಮತ್ತು ಡೊಂಬರ ಚೆನ್ನೆ

೨. ಮಂ. ಗೋ. ಪೈಗಳ ಗೊಲ್ಗೊಥಾ; ಹೆಬ್ಬೆರಳು, ನಂದಾದೀಪ, ವೈಶಾಖಿ, ಪ್ರಭಾಸ ಮತ್ತು ಅವರ ಅಷ್ಟ ಷಟ್ಪದಿಗಳು

೩. ಶ್ರೀಯವರ ಮೈಸೂರಿನ ಮಕ್ಕಳು, ಭರತಮಾತೆ, ಕನ್ನಡ ತಾಯ ನೋಟ, ಕನ್ನಡದ ಹೆಣ್ಣು ಮತ್ತು ಅಶ್ವತ್ಥಾಮನ್, ಪಾರಸಿಕರ (ಕಾವ್ಯ ನಾಟಕಗಳು)

೪. ಡಿ. ವಿ. ಗುಂಡಪ್ಪನವರ ಉಮರನ ಒಸಗೆ; ಮ್ಯಾಕ್‌ಬೇತ್; ಮಂಕು ತಿಮ್ಮನ ಕಗ್ಗ ಮತ್ತು ಅಂತಃಪುರ ಗೀತೆ, ಮತ್ತು ಅವರ ಬಿಡಿ ಕವನಗಳು.

೫. ಶ್ರೀನಿವಾಸರಚಿತ, ಮದಲಿಂಗನ ಕಣಿವೆ, ಮಾಂಬಿನಾಯಿ; ಗೌಡರ ಮಲ್ಲಿ, ಮೂಕನ ಮಕ್ಕಳು; ಕಪ್ಪೆ ಚೆನ್ನಮೂರ್ತಿ; ಸೋಜಿಗದ ಹೊಳಲು ಮುಂತಾದ ಕಥನ ಕವನಗಳು, ಅರುಣ, ಚೆಲುವು, ಮಲಾರ ಇವುಗಳಲ್ಲಿನ ಕೆಲವು ಕವಿತೆಗಳು; ಚೌದಶಪದಿಗಳು.

ಕಥನ ಕವನಗಳನ್ನು ಕಟ್ಟುವಲ್ಲಿ, ಹೆಣೆಯುವಲ್ಲಿ ಶ್ರೀನಿವಾಸರು ಮೇಲುಗೈ; ಬಿಡಿ ಭಾವಗೀತಗಳು ಈ ಮಟ್ಟಕ್ಕೆ ಬರಲಾರವು. ಆದರೂ, "ಕಲ್ಲೋ, ಹೂವೋ, ಮಲ್ಲಮ್ಮಾ", "ಗೊಮ್ಮಟೇಶ್ವರ" ಹಾಳೂರು ಮುಂತಾದವು ಚೆನ್ನಾಗಿವೆ.

೧೯೪೫ರಲ್ಲಿ ಬರೆದ "ಆಸೆಯ ತಾರೆ" ಎಂಬುದು ನಿಜವಾಗಿಯೂ ಒಳ್ಳೆಯ ಕವಿತೆ.

೬. ಕುವೆಂಪುರವರ ಒಟ್ಟ ಕೃತಿರಾಶಿಯಿಂದ ಹೀಗೆ ಆಯ್ದುಕೊಳ್ಳಬಹುದು. ಈ ಕ್ರಮದ ರೀತಿಯಲ್ಲಿ:

ಬೊಮ್ಮನಹಳ್ಳಿ ಕಿಂದರಿ ಜೋಗಿ; **ಹೀರೆಯ ಹೂವು**; ಮಾಗಿ ಬರುತಿದೆ; ಮುಂಗಾರು;

ಹೋಗುವೆನು ನಾ; ಕಲ್ಕಿ; ಕುಮಾರ ವ್ಯಾಸನು ಹಾಡಿದನೆಂದರೆ, ಕಲಿಯುಗ ದ್ವಾಪರವಾಗುವುದು;

ದೇವಕೇತು; ರೋರಿಕ್ ಚಿತ್ರಶಾಲಾ; ಗಣೇಶ ಗಾಥಾ, ಜಗನ್ಮಾತೆಗೆ ಮತ್ತು ಕೆಲ ಅಷ್ಟಪಟ್ಪದಿಗಳು.

ಸ್ಮಶಾನ ಕುರುಕ್ಷೇತ್ರ; ಯಮನ ಸೋಲು; ರಕ್ತಾಕ್ಷಿ; ಕೊರಳ್‌ಗೆ ಬೆರಳ್ ಕಾವ್ಯ ನಾಟಕಗಳು. ಚಿತ್ರಾಂಗದಾ ಮತ್ತು ರಾಮಾಯಣ ದರ್ಶನಂ ಕಾವ್ಯ. ಇವಿಷ್ಟಾದರೂ ಕವಿಯ ಭವ್ಯಘಟ್ಟಗಳ ಉದಯಕ್ಕೆ ಸಾಕ್ಷಿ. ತರುಣಕವಿಗೆ ಮುಟ್ಟದ ಬ್ರಹ್ಮಗಿರಿಯಮೇಲೆ ಕುವೆಂಪು ಮಂಡಿಸಿರುವರು.

೭. ಬೇಂದ್ರೆಯವರ ಹಕ್ಕಿ ಹಾರುತಿದೆ ನೋಡಿದಿರಾ; ಮೂವತ್ತುಮೂರು ಕೋಟಿ; ತುತ್ತಿನ ಚೀಲ; ಕುಣಿಯೋಣು ಬಾರ! ಬಂತೊಂದು ಕಲ್ಪನಾವಿಲಾಸಾ; ಕೃಷ್ಣ ಕೊಳಲನೂದಿದ—ಉಯ್ಯಾಲೆಯ ಸುನೀತಗಳು; ಗಂಗಾವತರಣ, ಮೇಘದೂತ ಮತ್ತು ಪಾಡು: ಸಖೀಗೀತ.

೮. ಕಡಂಗೊಡ್ಲುರವರ ಹಣ್ಣುಕಾಯಿ ಮತ್ತು ನಲ್ಮೆ ಎರಡೂ ಕೃತಿಗಳು. ತಿಳಿಗನ್ನಡದ ನಿರ್ಮಲ ದೃಷ್ಟಿ ಚಿತ್ತದಮೇಲೆ ಅಚ್ಚೊತ್ತಿದಂತೆ. ಇವರ ಕಾವ್ಯ ಪ್ರವಾಹ; ಹೆಚ್ಚಾಗಿ ಹರಿದು ಬರದ್ದು ದುರ್ದೈವ.

೯. ವಿ. ಸೀಯವರ ಕಾರಂಜಿದಾರಿ; ಕೋಗಿಲೆ; ಅಭೀಃ, ಹರಸು ತಾಯಿ; ನಾಡತಾಯಿ; ಗಡಿದಾಟು. ಕನ್ನಡ ನಾಡು ಮತ್ತು ೧೫-೮-೫೦.

ನಿನಗಾಗಿ; ವಿರಹ; ಏಕೋ ಮತ್ತು ಶತಂ ಜೀವೇಮ ಶರದಃ.

೧೦. ಪು. ತಿ. ನ. ರವರ ಕೊಳಲುಲಿವು; ಪಯಣಿಕರ ಹಾಡು; ಹೊಸ ಹಾಡು; ಕರಿಮುಗಿಲಿನ ಹಾಡು; ಗಣೇಶ ದರ್ಶನ. ಅಹಲ್ಯೆ ಮತ್ತು ಗೋಕುಲನಿರ್ಗಮನ, ದೋಣಿಯ ಬಿನದ; ಮತ್ತು ಕವಿರೂಪಕಗಳು. ಹಣತೆ ಎಂಬ ಮೊದಲ ಕೃತಿಯ ಕೆಲ ಪದ್ಯಗಳು.

೧೧ ರಾಜರತ್ನಂರವರ ಹೆಂಡ್ಕುಕರತ್ನನ ಪದ್ಯಗಳು, ಮಡಕೇರೀಲಿ ಮಂಜು; . . . ಮುಂತಾದವು. ಮತ್ತು ಕಂದನ ಕಾವ್ಯಮಾಲೆಯ ವಿಪುಲ ರಾಶಿ.

೧೨. ಕೆ. ಎಸ್. ನರಸಿಂಹಸ್ವಾಮಿಯವರ "ಮೈಸೂರು ಮಲ್ಲಿಗೆ" "ದೀಪದ ಮಲ್ಲಿ" ಯೊಳಗಿನ "ಹೃದಯಮೋಹಿನಿಗೆ" ಮತ್ತು "ನಿಮ್ಮ ಸಂಸಾರ ಇದು".

ಸಾರಾಂಶವಿಷ್ಟು: ವಿ. ಸೀ. ಯವರದು ಕಾವ್ಯ ಲೋಕದಲ್ಲಿ ನೆಳಲು ಬೆಳಕುಗಳ ಪ್ರಪಂಚ; ಇವರ ಆಳ ಸಂಸ್ಕೃತಿ; ಅತ್ಯುನ್ನತ. ಭಾವೈಕ ದೃಷ್ಟಿ ಶುದ್ಧ ಕವಿತೆಯ ಮೊನೆ, ಕೊನೆ, ಗೊನೆಗಳನ್ನು ಹರಡುವುದು ಪು. ತಿ. ನ. ನೇರವಾಗಿ ಪ್ರಕೃತಿ ಕವಿ; ತಾರಕ ಜೀವದಲ್ಲಿ ಆತಾರಕ ಕಣ್ಣು ಬೀರಿ ಗೀತಾಮಯ ಭಾವಬಂಧುರ ವ್ಯಕ್ತಿಗಳನ್ನು ನಿರ್ಮಿಸುವ ಶಕ್ತಿ ಇದೆ; ಕೌತುಕವಿದೆ. ಭಾವವ್ಯಂಜಕ. ಸೂಕ್ಷ್ಮದೃಷ್ಟಿಯಿದೆ ಇವರಿಗೆ. ಬೇಂದ್ರೆ ಪ್ರಾಪಂಚಿಕ ಕವಿಯೆ ಸರಿ; ಪ್ರಪಂಚದ ಕವಿ ಅಲ್ಲವೆನ್ನುವಷ್ಟು ಅನುಭಾವೀ ಸತ್ತ್ವಸಾರ, ಗೂಢ ವಿಚಾರ ಇವರಿಂದ ಹೊರಹೊಮ್ಮುವದು.



# ಕರ್ನಾಟಕ ಸಂಘಗಳ ಸುದ್ದಿಗಳು

## ಶಿವಮೊಗ್ಗ ಕರ್ನಾಟಕ ಸಂಘದಲ್ಲಿ ವಸಂತೋತ್ಸವ

ಶಿವಮೊಗ್ಗೆಯ ಕರ್ನಾಟಕ ಸಂಘದಲ್ಲಿ ಜೂ ೨೮ ಮತ್ತು ೨೯ ದಿನಾಂಕಗಳಲ್ಲಿ ವಸಂತ ಸಾಹಿತ್ಯೋತ್ಸವವನ್ನು ವಿಶೇಷ ವಿಜೃಂಭಣೆಯಿಂದ ಆಚರಿಸಲಾಯಿತು. ವಿದ್ಯಾಇಲಾಖೆಯ ಡೈರೆಕ್ಟರ್ ಶ್ರೀ ಜೆ. ಬಿ. ಮಲ್ಲಾರಾಧ್ಯರು ಅಗ್ರಾಸನಾಸೀನರಾಗಿದ್ದರು. ಜನಸಂದಣಿ ಭವನದ ಒಳಗೂ ಹೊರಗೂ ಕಿಕ್ಕಿರಿದು ನೆರೆದಿತ್ತು.

ಕಾರ್ಯದರ್ಶಿ ಶ್ರೀ ವಸುದೇವ ಭೂಪಾಲಂ ಅಧ್ಯಕ್ಷರಿಗೆ ಸಾದರ ಸ್ವಾಗತವನ್ನು ನೀಡಿದರು. ಸಂಘ ನಗರದ ಸಾಂಸ್ಕೃತಿಕ ಕೇಂದ್ರವಾಗಲು ತಮ್ಮ ನಿಯೋಜನೆಗಳನ್ನು ವಿವರಿಸಿ ಇದಕ್ಕಾಗಿ ಪೌರರ ಸಮೃದ್ಧ ಸಹಾನುಭೂತಿ ಅತ್ಯವಶ್ಯಕವೆಂದು ತಿಳಿಸಿದರು. ಶ್ರೀಮತಿ ಲಕ್ಷ್ಮಿ, ಆನಂದ ಮುಂತಾದವರು ಸುಶ್ರಾವ್ಯವಾಗಿ ಹಾಡಿದರು. ವಸಂತ ಸ್ಪರ್ಧೆಗಳಲ್ಲಿ ಬಹುಮಾನಿತರಾದ ಹಲವರು ತಮ್ಮ ಪ್ರತಿಭಾಪ್ರದರ್ಶನಮಾಡಿ ಸಭಾಸದರನ್ನು ರಂಜಿಸಿದರು. ಶ್ರೀ ವಸುದೇವ ಭೂಪಾಲಂರ ಕೆಲವು ಕವಿತೆಗಳ ಭಾವಗಳನ್ನು ಕುಮಾರಿ ಸುಶೀಲ ನರ್ತನದ ಮೂಲಕ ಅಭಿವ್ಯಕ್ತಗೊಳಿಸಿದ ಕಾರ್ಯಕ್ರಮ ವಿಶೇಷಮೆಚ್ಚುಗೆಗೆ ಪಾತ್ರವಾಯಿತು. ದೇವಂಗಿ ಚಂದ್ರಶೇಖರರ ಕಾವ್ಯವಾಚನವೂ, ಸೋದರ ಸಂಘದ ಮೂರು ನಾಟಕಗಳ ಪ್ರದರ್ಶನ ನಡೆದವು. ಸರಸಿ, ಜನಾನುರಾಗಿ ಅಧಿಕಾರಿಗಳಾದ ಶ್ರೀ ಮಲ್ಲಾರಾಧ್ಯರು ವಿದ್ವತ್‌ಪೂರ್ಣವೂ, ಜ್ಞಾನಪ್ರಚೋದಕವೂ ಆದ ಭಾಷಣಮಾಡಿದರು.

ಅಧ್ಯಕ್ಷ ಶ್ರೀ ಮಲ್ಲಾರಾಧ್ಯರ ವಿಚಾರ ಪರಿಪ್ಲುತವಾದ ಭಾಷಣ ಮುಗಿದೊಡನೆಯೇ ಧೀರ್ಘ ಕರತಾಡನಗಳು ಸಭಾಂಗಣವನ್ನು ಸ್ಪಂದಿಸಿತು.

ವಸಂತೋತ್ಸವದ ಈ ಎರಡು ದಿನ ಶಿವಮೊಗ್ಗಾದ ಪೌರರು, ಸರ್ಕಾರಿ ಅಧಿಕಾರಿಗಳು ವಿದ್ಯಾರ್ಥಿ ವಿದ್ಯಾರ್ಥಿನಿಯರು ನೃತ್ಯ, ಸಂಗೀತ, ನಾಟಕ ಸಾಹಿತ್ಯಕ ಭಾಷಣಗಳ ಹೊನಲಿನಲ್ಲಿ ಹಿಗ್ಗಿ ನಲಿದರು.

ಕರ್ನಾಟಕ ಸಂಘದ ಕಾರ್ಯದರ್ಶಿ ಶ್ರೀ ವಸುದೇವ ಭೂಪಾಲಂ, ಅಧ್ಯಕ್ಷರಿಗೂ, ಕಾರ್ಯಕ್ರಮ ಕರ್ತರಿಗೂ, ಕಿಕ್ಕಿರಿದು ನೆರೆದ ಸಭಾಸದರಿಗೂ ಅರ್ಪಿಸಿದ ವಂದನೆಗಳೊಂದಿಗೆ ಉತ್ಸವ ಮುಕ್ತಾಯವಾಯಿತು.

## ಗೌರಮ್ಮ ಸ್ಮಾರಕ ಸಮಿತಿ, ಮಡಿಕೇರಿ

ಮೇಲಿನ ಸಮಿತಿಯವರು ಏರ್ಪಡಿಸಿದ್ದ ಕಥಾ ಸ್ಪರ್ಧೆಗೆ ಒಟ್ಟು ೪೫ ಕಥೆಗಳು ಬಂದಿದ್ದುವು. ಉತ್ತಮ ತರದ ಕಥೆಗಳು ಇರಲಿಲ್ಲವೆಂದು ನಿರ್ಣಯಕಾರರು ಅಭಿಪ್ರಾಯವಾಗಿದೆ. ಈ ಕಥೆಗಳಲ್ಲಿ ೧೪ ಉತ್ತರ ಕರ್ನಾಟಕದಿಂದಲೂ ೪ ದಕ್ಷಿಣಕನ್ನಡ ಜಿಲ್ಲೆಯಿಂದಲೂ ೧೯ ಮೈಸೂರು ಪ್ರಾಂತ್ಯದಿಂದಲೂ ೧ ಬಳ್ಳಾರಿಯಿಂದಲೂ ಉಳಿದವು ಕೊಡಗಿನವೂ ಆಗಿದ್ದುವು. ಶ್ರೀ ಎಸ್. ಆರ್. ನಾರಾಯಣರಾಯರೂ (ಭಾರತೀಸುತ) ಶ್ರೀ ಎಂ. ಎಸ್. ಅನಂತಪದ್ಮನಾಭರಾಯರೂ (ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರೀ ಸಮಿತಿಯ ಸದಸ್ಯರೂ) ಮತ್ತು ಶ್ರೀ ಜಿ. ಟಿ. ನಾರಾಯಣರಾಯರೂ (ಮಂಗಳೂರಿನ ಸೈಂಟ್ ಅಲೋಸಿಯಸ್ ಕಾಲೇಜಿನ ಲೆಕ್ಚರರು) ಮಾನ್ಯ ನಿರ್ಣಯಕಾರರಾಗಿ ಸಹಾಯ ಮಾಡಿದ್ದಾರೆ: ಕಥೆಗಳ ಮಟ್ಟವನ್ನು ಅಳೆದಿದ್ದಾರೆ. ಇವರೆಲ್ಲರಿಗೂ ನಮ್ಮ ಧನ್ಯವಾದಗಳು.

ಈ ಸ್ಪರ್ಧೆಯಲ್ಲಿ ಬೆಳಗಾವಿಯ ಲಿಂಗರಾಜ ಕಾಲೇಜಿನ ವಿದ್ಯಾರ್ಥಿ ಶ್ರೀ ಚಿದಂಬರ ಕಾಶೀನಾಥ ಜೋಶಿ ಇವರು ಬರೆದ "ನಾಗರತ್ನ" ಎಂಬ ಕಥೆಗೆ ಎರಡನೇ ಬಹುಮಾನವೂ, ಕಾನಕಾನಹಳ್ಳಿಯ ಶ್ರೀಮತಿ ಯಂ. ಕೆ. ಜಯಲಕ್ಷ್ಮಿ ಇವರು ಬರೆದ "ಬಾಳಹಂಬಲ" ಎಂಬ ಕಥೆ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳದ ಶ್ರೀ ಆರ್. ಎ. ಶೆಣೈಯವರು ಬರದ "ತ್ಯಾಗ" ಎಂಬ ಕಥೆ, ಇವೆರಡಕ್ಕೂ ಮೂರನೇ ಬಹುಮಾನವೂ ದೊರೆತಿರುವುದು. ಇವರಿಗೆಲ್ಲಾ ನಮ್ಮ ಹೃತ್ಪೂರ್ವಕ ಅಭಿನಂದನೆಗಳು.

ಕಳೆದಸಾರಿ ೨೮ ಕಥೆಗಳು ಮಾತ್ರ ಇದ್ದುವು. ಈ ಸಾರಿ ಹೆಚ್ಚಿಗೆ ಬಂದಿರುವುದು ಸಂತೋಷದ ಸಂಗತಿಯಾಗಿದೆ. ಮುಂದಿನ ವರ್ಷ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಕನ್ನಡ ಕಥೆಗಾರರು ಈ ಸ್ಪರ್ಧೆಯಲ್ಲಿ ಭಾಗವಹಿಸುವರೆಂದು ಹಾರೈಸಲಾಗಿದೆ.

# ಕನ್ನಡ ಸಾಹಿತ್ಯ ಪರಿಷತ್ತು

## ಬೆಂಗಳೂರು

## ಗಮಕ ತರಗತಿಯ ನಿಯಮಗಳು

ತರಗತಿಗೆ ಸೇರಲು ಅಪೇಕ್ಷೆಪಡುವವರು ಪ್ರತಿ ತಿಂಗಳು ರೂ. ೧-೮-೦ ಶುಲ್ಕ ಕೊಡಬೇಕು. ಸೇರುವಾಗ ಪ್ರವೇಶಧನ ರೂ. ೧-೦-೦ ಕೊಡತಕ್ಕದ್ದು. ಪರೀಕ್ಷಾ ಶುಲ್ಕ ರೂ. ೩-೮-೦ ಯನ್ನು ೧೯೫೨ನೆಯ ಅಕ್ಟೋಬರ್ ತಿಂಗಳ ಕೊನೆಯ ಒಳಗಾಗಿ ಸಲ್ಲಿಸಬೇಕು.

### ೧೯೫೨ನೆಯ ಗಮಕ ತರಗತಿಗೆ ನಿಯಮಿತವಾದ

### ಪಠ್ಯ ಭಾಗಗಳು – I ಪದ್ಯಭಾಗ ( ವಾಚನಪರೀಕ್ಷೆ )

(೧) ವೃಷಭೇಂದ್ರವಿಜಯ (ಷಡಕ್ಷರಿ)-೯ನೆಯ ಆಶ್ವಾಸ-ಕೋಳೂರು ಕೊಡಗೂಸಿನ ಕಥೆ-೭೫, ೬೮ ಮತ್ತು ೮೬ನೆಯ ಪದ್ಯಗಳನ್ನು ಬಿಟ್ಟು ಉಳಿದಭಾಗ ಪೂರ್ತಿ.

(ಪದ್ಯಸಾರ II ಭಾಗದಲ್ಲಿ ಮೇಲ್ಕಂಡ ಭಾಗವಿದೆ. ಇದರಲ್ಲಿ ಮನಮೊಳಸಿ, ಪುರಿಗಡಬು, ಪಾಲಂ ತಂದು ಈ ಪದ್ಯಗಳನ್ನು ಬಿಟ್ಟು ಉಳಿದ ಭಾಗ ಪೂರ್ತಿ)—

ಇದರ ಜೊತೆಗೆ ಮಂಗಳಾಚರಣೆ ಪದ್ಯ, "ಕೊಡಗೂಸಿನ ಸತ್ಕಥೆಯಂ" ಮತ್ತು "ಸುರರಾಜ ರತ್ನ" ಈ ಮೂರು ಪದ್ಯಗಳನ್ನೂ ಸೇರಿಸಿದೆ.

(೨) ಹರಿಶ್ಚಂದ್ರಕಾವ್ಯ ಸಂಗ್ರಹ–ವಸಿಷ್ಠ ವಿಶ್ವಾಮಿತ್ರರ ಸಂವಾದ.
ಕಥಾರಂಭ:—ಪದ್ಯಗಳು ೧ ಮತ್ತು ೨
ವಸಿಷ್ಠ ವಿಶ್ವಾಮಿತ್ರರ ಸಂವಾದ : ಪದ್ಯಗಳು :—
೧ ರಿಂದ ೬, ೯ ರಿಂದ ೧೧, ೧೩ ರಿಂದ ೧೫ ಮತು ೨೧.

(೩) ಕುಮಾರವ್ಯಾಸ ಭಾರತ (ಆದಿಪರ್ವ – ಸಂಭವಪರ್ವ) – ೧೪ನೆಯ ಸಂಧಿ—ಕರ್ಣ ಜನನ – ಸೂಚನೆ ಪದ್ಯಗಳು ೨೬ ರಿಂದ ೩೦, ೩೨ರ ಪೂರ್ವಾರ್ಧ ಮತ್ತು ೩೧ರ ಉತ್ತರಾರ್ಧ, ೩೩ ರಿಂದ ೩೯, ೪೧ ಮತ್ತು ೪೨ನೆಯ ಪದ್ಯಗಳು

ಇದರ ಜೊತೆಗೆ ಮಂಗಳಾಚರಣೆ ಪದ್ಯ, "ವೇದಪುರುಷನ" "ಅರಸುಗಳಿಗಿದು" ಮತ್ತು "ಹಲಗೆ ಬಳಪವ" ಈ ನಾಲ್ಕು ಪದ್ಯಗಳನ್ನೂ ಸೇರಿಸಿದೆ.

(೪) ತೊರವೆ ರಾಮಾಯಣ (ಬಾಲಕಾಂಡ – ೧೫ನೆಯ ಸಂಧಿ) ಹರಧನುರ್ಭಂಗ:—ಈ ಸಂಧಿಯಲ್ಲಿ–ಪದ್ಯಸಂಖ್ಯೆ ೩-೮-೨೧-೨೨-೨೬-೨೭ ಮತ್ತು ೪೩ ಈ ಏಳು ಪದ್ಯಗಳನ್ನು ಬಿಟ್ಟು ಉಳಿದ ಪದ್ಯಗಳು.

(೫) ವಚನಗಳು (ಬಸವಣ್ಣನವರು ಮತ್ತು ಅಕ್ಕಮಹಾದೇವಿ) – ಕನ್ನಡ ಬಾವುಟದಿಂದ—ಪುಟ ೩೮ರಿಂದ – ನಂಬಿಕರೆದಡೆ, ಹೊತ್ತಾರೆ ಎದ್ದು, ಕಳಬೇಡ, ವಚನದಲ್ಲಿ, ಪರಚಿಂತೆ— ಈ ಆರು ವಚನಗಳು ಮತ್ತು ಪುಟ–೪೭ ರಿಂದ–ಪಕ್ಷಿಯ ನೆಲಗಟ್ಟು, ಮಂಗಳವೇ, ಅಯ್ಯಾ ನೀ ಕೇಳಿದರೆ, ಸಾವಿಲ್ಲದ, ಚಂದನವ, ಹೊಳೆವ ಕೆಂಜಡೆಗಳ— ಈ ಆರು ವಚನಗಳು ಮಾತ್ರ.

(೬) ಆರು ಬಗೆಯ ಷಟ್ಪದಿಗಳು, ದ್ವಿಪದಿ, ತ್ರಿಪದಿ, ಚೌಪದಿ' ಸಾಂಗತ್ಯ, ರಗಳೆ (ಮಂದಾನಿಲ-ಲಲಿತ ಮತ್ತು ಉತ್ಸಾಹ) ಮತ್ತು ಸೀಸಪದ್ಯ ಇವುಗಳಲ್ಲಿ ಯಾವುದಾದರೂ ಮಾದರಿಯ ಪದ್ಯಗಳು –

(೭) ಶ್ರೀಯುತರಾದ ಡಿ. ವಿ. ಜಿ , ಬೇಂದ್ರೆ, ಪು. ತಿ. ನ. ಮುಗಳಿ, ಗೋಪಾಲಕೃಷ್ಣ ಅಡಿಗ, ಪರಮೇಶ್ವರಭಟ್ಟ, ವಿ. ಸೀ., ಕುವೆಂಪು, ವಾಲಿಗಂಗಪ್ಪ ಮತ್ತು ಗೋವಿಂದ ಪೈ ಇವರು ರಚಿಸಿರುವ ಕವಿತೆಗಳ ಪೈಕಿ ಯಾವುದಾದರೂ ಒಂದೊಂದು ಒಂದೊಂದು ಮಾತ್ರ—

### II ಶಾಸ್ತ್ರಭಾಗ ( ಲಿಖಿತ ಪರೀಕ್ಷೆ )

ಲಿಖಿತ ಪರೀಕ್ಷೆಗೆ ಸಂಕ್ಷೇಪವಾಗಿ (i) ಕಾವ್ಯವಿಭಾಗ (ii) ಕನ್ನಡ ಛಂದಸ್ಸು (iii) ಸಪ್ತ ಸ್ವರಗಳು ಮತ್ತು ಅವುಗಳ ಪ್ರಭೇದ (iv) ಬಳಕೆಯಲ್ಲಿರುವ ೧೦–೧೫ ರಾಗಗಳ ವಿಷಯ (v) ಗಮಕ ಕಲೆಯ ಮುಖ್ಯ ಲಕ್ಷಣಗಳು (vi) ಪದ್ಯವನ್ನೋದಲು ಅನುಸರಿಸಬೇಕಾದ ಸಾಮಾನ್ಯ ನಿಯಮಗಳು (vii) ಕವಿಗಳ ವಿಚಾರ ಮತ್ತು ಪದ್ಯಗಳ ಅರ್ಥ – ತಾತ್ಪರ್ಯ ಇತ್ಯಾದಿ –

ಗಮಕಿ ಶ್ರೀ ಎಂ. ರಾಘವೇಂದ್ರರಾಯರ 'ಕಾವ್ಯಗಾಯನ ಕಲಾಸಂಗ್ರಹ' ಎಂಬ ಪುಸ್ತಕವನ್ನು ಅಧ್ಯಾಪಕರೂ, ವಿದ್ಯಾರ್ಥಿಗಳೂ ಪರಾಮರ್ಶಿಸಬಹುದು.

ಸಿ. ಕೆ. ನಾಗರಾಜರಾವ್
ಗೌ॥ ಕಾರ್ಯದರ್ಶಿ.



ಸಂಪುಟ ೧೫ ] ಜೂನ್ ೧೯೫೨ [ ಸಂಚಿಕೆ ೬

## ಪತ್ರಿಕೆ ತಡವಾದುದಕ್ಕೆ ಸಮಾಧಾನ

ಏಪ್ರಿಲ್ ತಿಂಗಳಿಂದ 'ಕನ್ನಡ ನುಡಿ' ಸಂಚಿಕೆಗಳು ಕಾಲಕ್ಕೆ ಸರಿಯಾಗಿ ಪ್ರಕಟವಾಗದೆ ಪರಿಷತ್ತಿನ ಚಂದಾದಾರರಿಗೂ, ಇತರ ಗ್ರಾಹಕರಿಗೂ ಬಹಳ ಬೇಸರಿಕೆಯಾಗಿರುವುದು ಸಹಜವಾಗಿದೆ. ಅದಕ್ಕಾಗಿ ಕ್ಷಮಾಪಣೆಯನ್ನು ಕೇಳಿಕೊಳ್ಳುತ್ತೇವೆ. ಪರಿಷತ್ತಿಗೆ ಸೇರಿದ ಶ್ರೀಕಂಠಯ್ಯ ಅಚ್ಚುಕೂಟದಲ್ಲಿ ಪಠ್ಯಪುಸ್ತಕ, ಸಮ್ಮೇಳನದ ಭಾಷಣಗಳು ಮೊದಲಾದುವು ಅಚ್ಚಾಗಬೇಕಾದ ಪ್ರಸಂಗಗಳೂ, ನಮಗೆ ಕಾಗದ ಒದಗದ ಸಂದರ್ಭಗಳೂ, ಕೆಲಸಗಾರರನ್ನು ಒದಗಿಸಿಕೊಳ್ಳಬೇಕಾದ ಆವಶ್ಯಕತೆಗಳೂ, ಎಲ್ಲವೂ ಸೇರಿಕೊಂಡು ಸಂಚಿಕೆಗಳು ಹಿಂದೆಬಿದ್ದುವು. ಜತೆಗೆ ಮಾರ್ಚ್–ಏಪ್ರಿಲ್ ತಿಂಗಳುಗಳ ಜಂಟಿಸಂಚಿಕೆಯನ್ನು ಅಂಚೆಗೆ ಕಳಿಸಬೇಕೆಂದಿದ್ದಾಗ ಅಂಚೆಕಚೇರಿಯವರ ಆಕ್ಷೇಪಣೆ, ಆ ಸಂಬಂಧದಲ್ಲಿ ಪತ್ರವ್ಯವಹಾರ–ಮೊದಲಾದುವೂ ಸೇರಿಕೊಂಡುವು. ಈಗ ಎಲ್ಲವನ್ನೂ ವ್ಯವಸ್ಥೆಗೆ ತರಲಾಗಿದೆ. ಈಗಾಗಲೇ ಮಾರ್ಚ್–ಏಪ್ರಿಲ್ ತಿಂಗಳುಗಳ ಸಂಚಿಕೆಯನ್ನು ಕಳಿಸಿಕೊಟ್ಟಿದ್ದೇವೆ. ಮೇ ತಿಂಗಳ ಸಮ್ಮೇಳನ ಸಂಚಿಕೆಯನ್ನು ಹತ್ತು ದಿನಗಳ ಹಿಂದೆ ಕಳಿಸಾಯಿತು. ಈಗ ಜೂನ್ ತಿಂಗಳ ಸಂಚಿಕೆಯನ್ನು ಕಳಿಸಿಕೊಟ್ಟಿದ್ದೇವೆ. ಈ ತಿಂಗಳು ಕೊನೆಯೊಳಗಾಗಿ ಜುಲೈ ತಿಂಗಳ ಸಂಚಿಕೆಯನ್ನು ಕಳಿಸಿಕೊಡಬೇಕೆಂದಿದ್ದೇವೆ. ಆದ್ದರಿಂದ ಮೊದಲಿನಂತೆಯೇ 'ಕನ್ನಡ ನುಡಿ'ಗೆ ಎಲ್ಲ ಚಂದಾದಾರರೂ ಗ್ರಾಹಕರೂ ಪ್ರೋತ್ಸಾಹ ನೀಡುತ್ತ ಬರಬೇಕೆಂದು ಪ್ರಾರ್ಥನೆ.

## ವಿದ್ಯಾಭ್ಯಾಸಕ್ರಮದಲ್ಲಿ ಸುಧಾರಣೆಗಳು

ಮೈಸೂರು ಸಂಸ್ಥಾನದಲ್ಲಿ ವಿದ್ಯಾಭ್ಯಾಸದ ಸುಧಾರಣೆಗಳಾಗುತ್ತವೆಯೆಂದು ಈಗ ಕೆಲವು ವರ್ಷಗಳಿಂದ ಸುದ್ದಿಗಳೂ ಭಾಷಣಗಳೂ ಹೊರಬೀಳುತ್ತಲೇ ಬಂದಿವೆ. ಮೊನ್ನೆ ಮೇ ತಿಂಗಳ ಕೊನೆಯಲ್ಲಿ ಸೆಕಂಡರಿ ಎಜ್ಯುಕೇಷನ್ ಬೋರ್ಡಿನವರು ಈ ಸುಧಾರಣೆಗಳ ವಿಷಯವಾಗಿ ಚರ್ಚೆಮಾಡಿ ಕೆಲವು ತಾತ್ಕಾಲಿಕ ನಿರ್ಣಯಗಳನ್ನು ಮಾಡಿರುವರೆಂದೂ ಆ ನಿರ್ಣಯಗಳಮೇಲೆ ಮೈಸೂರು ಸರ್ಕಾರದವರು ಶೀಘ್ರದಲ್ಲಿಯೇ ಆಜ್ಞೆಗಳನ್ನು ಹೊರಡಿಸುತ್ತಾರೆಂದೂ ತಿಳಿದು ಬಂದಿದೆ.

ಈಗ ನಮ್ಮ ಮುಂದೆ ಪ್ರಧಾನವಾಗಿ ನಿಂತಿರುವ ಪ್ರಶ್ನೆಗಳು ಇವು :—

(೧) ಕನ್ನಡ ಎಲ್ಲ ದರ್ಜೆಗಳಲ್ಲಿಯೂ — ವಿಶ್ವವಿದ್ಯಾನಿಲಯವೂ ಸೇರಿ — ಶಿಕ್ಷಣ ಮಾಧ್ಯಮವಾಗಬೇಕು.

(೨) ಕನ್ನಡ ಎಲ್ಲ ದರ್ಜೆಗಳಲ್ಲಿಯೂ — ವಿಶ್ವವಿದ್ಯಾನಿಲಯವೂ ಸೇರಿ — ಪ್ರಥಮ ಭಾಷೆಯೆಂದು ಆಚರಣೆಗೆ ಬರಬೇಕು.

(೩) ಭರತಖಂಡದ ಆಡಳಿತದ ಭಾಷೆಯೆಂದು ಅಂಗೀಕಾರವಾಗಿರುವ ಹಿಂದಿ ಭಾಷೆಗೆ ನಮ್ಮ ವಿದ್ಯಾಭ್ಯಾಸಕ್ರಮದಲ್ಲಿ ಇರಬೇಕಾದ ಸ್ಥಾನಮಾನಗಳ ನಿಷ್ಕರ್ಷೆ.

(೪) ಪ್ರಪಂಚದ ಅಂತರ ರಾಷ್ಟ್ರೀಯ ಭಾಷೆಯೆಂದೂ, ಜ್ಞಾನಭಂಡಾರ ಸಮೃದ್ಧವಾಗಿರುವ ಭಾಷೆಯೆಂದೂ ಪ್ರಸಿದ್ಧಿಪಡೆದಿರುವ ಇಂಗ್ಲಿಷ್ ಭಾಷೆಗೆ ನಮ್ಮ ವಿದ್ಯಾಭ್ಯಾಸಕ್ರಮದಲ್ಲಿ ಇರಬೇಕಾದ ಸ್ಥಾನಮಾನಗಳು.

ಮಿಡಲ್‌ಸ್ಕೂಲ್ ದರ್ಜೆಯಲ್ಲಿ ಕ್ಲಿಷ್ಟಭಾಷೆಯೂ ಪರಭಾಷೆಯೂ ಆದ ಇಂಗ್ಲಿಷನ್ನು ಇಟ್ಟುಕೊಳ್ಳಬೇಕೆ? ಹಿಂದಿಯನ್ನು ಯಾವ ದರ್ಜೆಯಲ್ಲಿ ಆರಂಭಿಸಬೇಕು? ಎಂಬುವ ವಿಚಾರಗಳಲ್ಲಿ ಭಿನ್ನಾಭಿಪ್ರಾಯ ಬರುವುದಕ್ಕೆ ಅವಕಾಶವಿದೆ. ಮಿಡಲ್‌ಸ್ಕೂಲ್ ದರ್ಜೆಯಿಂದ ಹೈಸ್ಕೂಲ್ ದರ್ಜೆಗೆ ಹೋಗುವ ವಿದ್ಯಾರ್ಥಿಗಳು ಎಷ್ಟುಮಂದಿ? ಹೋಗದೆ ನಿಂತುಬಿಡುವವರು ಎಷ್ಟುಮಂದಿ? ಹಾಗೆಯೇ ಹೈಸ್ಕೂಲ್ ದರ್ಜೆಯಿಂದ ಕಾಲೇಜಿಗೂ ಬೇರೆ ಬೇರೆ ವೃತ್ತಿಶಿಕ್ಷಣ ಶಾಲೆ, ಮೆಡಿಕಲ್‌ಸ್ಕೂಲ್–ಮೊದಲಾದುವುಗಳಿಗೂ ಹೋಗುವವರ ಸಂಖ್ಯೆ ಎಷ್ಟು? ಹಾಗೆ ಹೋಗದೆ ಹಿಂದೆ ನಿಂತುಬಿಡುವವರ ಸಂಖ್ಯೆ ಎಷ್ಟು? ಹಿಂದಿಯ ಮತ್ತು ಇಂಗ್ಲಿಷಿನ ರೂಢಿ ಯಾರಿಗೆ ಹೆಚ್ಚಾಗಿ ಬೇಕು. ಸಾರ್ವತ್ರಿಕ ಮತ್ತು ಸಾಮಾನ್ಯ ವಿದ್ಯಾಭ್ಯಾಸದಲ್ಲಿ ಈ ಭಾಷೆಗಳ ಪ್ರಯೋಜನ ಎಷ್ಟು? ಎಂಬುದನ್ನು ಸಾರ್ವಜನಿಕರೂ, ಸರ್ಕಾರವೂ ಆಲೋಚಿಸಬೇಕು. ಭಾಷೆಗಳನ್ನು ಕಲಿಯುವ ಶ್ರಮ ವ್ಯರ್ಥವಾಗದಂತೆ ನೋಡಿಕೊಳ್ಳಬೇಕು.

ಎರಡನೆಯದಾಗಿ, ಈಗ ಕನ್ನಡ ಮಾಧ್ಯಮ ಎನ್ನುವುದನ್ನು ತ್ರಿಶಂಕು ಸ್ವರ್ಗದಲ್ಲಿ ಮಧ್ಯದಲ್ಲಿ ನಿಲ್ಲಿಸಿದ್ದಾರೆ. ಹೈಸ್ಕೂಲು ದರ್ಜೆಯಲ್ಲಿ ಅದಕ್ಕೆ ಪ್ರೋತ್ಸಾಹವಿಲ್ಲ. ಮೈಸೂರು ವಿಶ್ವವಿದ್ಯಾನಿಲಯದವರು ನೇಮಿಸಿದ್ದ ಡಿಸೌಜಾ ಸಮಿತಿಯವರು ಸುಮಾರು ೧೬೦ ಹೈಸ್ಕೂಲುಗಳ ಪೈಕಿ ೭-೮ ಹೈಸ್ಕೂಲುಗಳು ಮಾತ್ರ ಕನ್ನಡ ಮಾಧ್ಯಮಕ್ಕೆ ಬೆಂಬಲ ಕೊಟ್ಟರೆಂದೂ, ಉಳಿದ ಹೈಸ್ಕೂಲುಗಳೆಲ್ಲ ಇಂಗ್ಲಿಷ್ ಮಾಧ್ಯಮ ಬೇಕೆಂದು ಕೇಳಿದರೆಂದೂ ತಿಳಿಸಿದ್ದಾರೆ. ಇದು ಎಂಥ ಶೋಚನೀಯ ಸ್ಥಿತಿ. ಇದಕ್ಕೆ ಕಾರಣ ಯಾವುದು? ಕಾರಣರು ಯಾರು? ಎಸ್. ಎಸ್. ಎಲ್. ಸಿ. ಪರೀಕ್ಷೆಗೆ ಕುಳಿತುಕೊಳ್ಳುವ ವಿದ್ಯಾರ್ಥಿಗಳಲ್ಲಿ ಕನ್ನಡ ಮಾಧ್ಯಮದವರು ಅಲ್ಪ ಸಂಖ್ಯಾತರು! ಹಿಂದೆ ಕನ್ನಡವನ್ನು ಹೈಸ್ಕೂಲುಗಳಲ್ಲಿ ಶಿಕ್ಷಣ ಮಾಧ್ಯಮವನ್ನಾಗಿ ಆಚರಣೆಗೆ ತಂದವರ ಉದ್ದೇಶ ಏನಾಗಿತ್ತು? ಈಗ ಏನಾಗಿದೆ? ಬೇಲೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಉದ್ಘಾಟನೆಮಾಡುತ್ತ ನಮ್ಮ ಪ್ರಧಾನ ಸಚಿವರಾದ ಶ್ರೀ ಕೆ. ಹನುಮಂತಯ್ಯನವರು ಸಹ, 'ಈಗ ಹೈಸ್ಕೂಲುಗಳಲ್ಲಿ ವ್ಯಾಸಂಗಮಾಡುವ ವಿದ್ಯಾರ್ಥಿವೃಂದದಲ್ಲಿ ಅನೇಕರು ಕನ್ನಡವನ್ನು ಬೋಧಕ ಭಾಷೆಯಾಗಿ ತೆಗೆದುಕೊಳ್ಳದೆ ಇಂಗ್ಲಿಷನ್ನೇ ಬೋಧಕಭಾಷೆಯಾಗಿ ಆರಿಸಿಕೊಳ್ಳುತ್ತಿದ್ದಾರೆ. ಇದು ಅವರವರ ಅಭಿರುಚಿಯನ್ನು ಮತ್ತು ವಿದ್ಯಾರ್ಥಿಗಳ ಪುರೋಭಿವೃದ್ಧಿಗೆ ಸಾಧಕವಾಗುವುದನ್ನು ಅವಲಂಬಿಸಿರುವ ಸಂಗತಿ. ಹಲವು ವಿದ್ಯಾರ್ಥಿಗಳಿಗೆ ಇಂಗ್ಲಿಷೇ ಬೋಧಕಭಾಷೆಯಾಗಿರಬೇಕೆಂಬ ಅಭಿರುಚಿ' ಎಂದು ಮುಂತಾಗಿ ಹೇಳಿ, 'ಇಲ್ಲಿ ನೆರೆದಿರುವ ತಮ್ಮಂಥ ಭಾಷಾಭಿಮಾನಿಗಳೂ ದೇಶಾಭಿಮಾನಿಗಳೂ ಅವರ ಒಲವನ್ನೂ ಅಭಿರುಚಿಯನ್ನೂ ಕನ್ನಡದ ಕಡೆಗೆ ತಿರುಗಿಸಿ, ಅವರು ಕನ್ನಡವನ್ನೇ ಬೋಧಕಭಾಷೆಯಾಗಿ ಆರಿಸಿಕೊಳ್ಳುವಂತೆ ಮಾಡುವ ವಿಚಾರವಾಗಿ ಬಹಳ ಕೆಲಸ ಮಾಡುವುದು ಸಾಧ್ಯವಿದೆ. ವಿದ್ಯಾರ್ಥಿ ವಿದ್ಯಾರ್ಥಿನಿಯರ ಮತ್ತು ಅವರ ತಾಯಿತಂದೆಗಳ ಅಭಿರುಚಿಯನ್ನು ಕನ್ನಡದ ಕಡೆಗೆ ತಿರುಗಿಸಬೇಕಾದುದು ಭಾಷಾಭಿಮಾನಿಗಳಾದ ತಮ್ಮ ಕೆಲಸ. ತಾವು ಅದನ್ನು ಆ ರೀತಿ ಕನ್ನಡದ ಕಡೆಗೆ ತಿರುಗಿಸಿದಮೇಲೆ, ಕನ್ನಡವನ್ನೇ ಸಮಗ್ರ ವ್ಯಾಸಂಗ ಕ್ರಮದಲ್ಲಿ ಬೋಧಕ ಭಾಷೆಯಾಗಿ ಏರ್ಪಡಿಸಿ ಪ್ರೋತ್ಸಾಹಿಸುವುದು ಸರ್ಕಾರದವರಾದ ನಮ್ಮ ಕೆಲಸ' ಎಂದು ತಿಳಿಸಿದ್ದಾರೆ.

ಹೈಸ್ಕೂಲ್ ದರ್ಜೆಯಲ್ಲಿ ಕನ್ನಡಿಗರ ಸಂಖ್ಯೆ ಹೆಚ್ಚಾಗಿದೆಯೆಂದು ನಾವು ನಂಬಿದ್ದೇವೆ. ಆದರೂ ಕನ್ನಡ ಮಾಧ್ಯಮವನ್ನು ಬಿಟ್ಟು ಇಂಗ್ಲಿಷ್ ಮಾಧ್ಯಮವನ್ನು ಏಕೆ ಬಯಸುತ್ತಾರೆ? ಅದಕ್ಕೆ ಕಾರಣ ಪರಭಾಷಾ ಮೋಹವೇ? ಹೈಸ್ಕೂಲ್ ದರ್ಜೆ ಮುಗಿಸಿಕೊಂಡ ವಿದ್ಯಾರ್ಥಿ ಕಾಲೇಜಿಗೆ ಸೇರಿದರೆ ಅಲ್ಲಿ ಬೋಧಕಭಾಷೆ ಇಂಗ್ಲಿಷ್. ಹೈಸ್ಕೂಲಿನಲ್ಲಿ ಮೂರು ವರ್ಷ ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಶಾಸ್ತ್ರ — ಮೊದಲಾದುವನ್ನೆಲ್ಲ ಕನ್ನಡದಲ್ಲಿ ಕಲಿತ ವಿದ್ಯಾರ್ಥಿ ತಟ್ಟನೆ ಬದಲಾಯಿಸಿಕೊಂಡು ಆ ಶಾಸ್ತ್ರಗಳನ್ನೆಲ್ಲ ಇಂಗ್ಲಿಷ್‌ನಲ್ಲಿ ಕಲಿಯಬೇಕು. ಕನ್ನಡದಲ್ಲಿಯೇ ಶಿಕ್ಷಣವನ್ನು ಮುಂದುವರಿಸುವುದಕ್ಕೆ ವಿದ್ಯಾರ್ಥಿಗಳಿಗೆ ಅವಕಾಶವನ್ನು ಕಲ್ಪಿಸಿಕೊಡದೆ ಬಲಾತ್ಕಾರವಾಗಿ ಇಂಗ್ಲಿಷಿಗೆ ನೂಕುತ್ತಿರುವವರು ಯಾರು? ಎಂತಿದ್ದರೂ ಕಾಲೇಜಿಗೆ ಹೋದಾಗ ಇಂಗ್ಲಿಷ್ ಬೋಧಕಭಾಷೆ, ಹೈಸ್ಕೂಲಿನಲ್ಲಿ ಮೂರುವರ್ಷದ ಕನ್ನಡದ ಶಾಸ್ತ್ರ ಏಕೆ? ಪುಣ್ಯವಿಲ್ಲ ಪುರುಷಾರ್ಥವಿಲ್ಲ, ಎಂದು ವಿದ್ಯಾರ್ಥಿಗಳು ಇಂಗ್ಲಿಷ್ ಮಾಧ್ಯಮವನ್ನೇ ಆಶಿಸಿದರೆ ಕನ್ನಡದ ಭಾಷಾಭಿಮಾನಿಗಳು ಏನು ಮಾಡಬೇಕು? ಹೈಸ್ಕೂಲ್ ದರ್ಜೆಯ ಅನಂತರ ಕನ್ನಡಕ್ಕೆ ಅಡ್ಡಲಾಗಿಟ್ಟಿರುವ ಗೋಡೆಯನ್ನು ಸರ್ಕಾರದವರು ಕಿತ್ತುಹಾಕಲಿ. ಕಾಲೇಜು ತರಗತಿಗಳಲ್ಲೂ ಕನ್ನಡ ಬೋಧಕಭಾಷೆಯಾಗುವಂತೆ ಏರ್ಪಡಿಸಲಿ. ಆಗ ವಿದ್ಯಾರ್ಥಿಗಳು ಏನು ಮಾಡುತ್ತಾರೆಂಬುದು ತಿಳಿಯುತ್ತದೆ, ಕನ್ನಡ ಭಾಷಾಭಿಮಾನಿಗಳು ಏನು ಮಾಡುತ್ತಾರೆಂಬುದೂ ತಿಳಿಯುತ್ತದೆ.

ವಿಶ್ವವಿದ್ಯಾನಿಲಯದ ಮಾತು ಬಂದರೆ, ಇತರ ವಿಶ್ವವಿದ್ಯಾನಿಲಯಗಳು, ಭರತಖಂಡದ ಸಮಗ್ರ ವಿದ್ಯಾಭ್ಯಾಸಕ್ರಮ, ಪ್ರೌಢವಿದ್ಯಾಭ್ಯಾಸದ ಏಕರೂಪತೆ— ಮೊದಲಾದ ಪ್ರಶ್ನೆಗಳನ್ನೆಲ್ಲ ನಮ್ಮ ಮುಂದೆ ಒಡ್ಡಿ ಕನ್ನಡಕ್ಕೆ ಬೋಧಕಭಾಷೆಯಾಗುವ ಅವಕಾಶವನ್ನು ತಪ್ಪಿಸಲು ಪ್ರಯತ್ನಿಸುತ್ತಾರೆ. ಕನ್ನಡ ಏಳಿಗೆಗೆ ಬರುವುದು ಹೇಗೆ?

ಈಗ ಕನ್ನಡಕ್ಕೆ ಬೆಂಬಲ ಕೊಡಬೇಕೆಂದು ಸರ್ಕಾರದವರು ಆಲೋಚಿಸುತ್ತಿರುವುದು ಒಂದು ಸಂತೋಷದ ಸಂಗತಿ. ಸೆಕೆಂಡರಿ ಎಜುಕೇಷನ್ ಬೋರ್ಡಿನವರು, ಮಿಡಲ್ ಸ್ಕೂಲುಗಳಲ್ಲಿಯೂ ಹೈಸ್ಕೂಲುಗಳಲ್ಲಿಯೂ ಕನ್ನಡವೊಂದೇ ಬೋಧಕ ಭಾಷೆ

ಯಾಗಿರಬೇಕೆಂದು ಶಿಫಾರಸು ಮಾಡಿದ್ದಾರೆ. ಇದರ ಜತೆಗೆ ಈಗ ನಮ್ಮ ವಿದ್ಯಾಭ್ಯಾಸದ ಇಲಾಖೆಯ ಡೈರೆಕ್ಟರ್ ಶ್ರೀ ಜೆ. ಬಿ. ಮಲ್ಲಾರಾಧ್ಯರು ಶಿವಮೊಗ್ಗದ ಕರ್ಣಾಟಕ ಸಂಘದವರು ಏರ್ಪಡಿಸಿದ್ದ ವಸಂತ ಸಾಹಿತ್ಯೋತ್ಸವದಲ್ಲಿ ತಮ್ಮ ಅಧ್ಯಕ್ಷ ಭಾಷಣದಲ್ಲಿ ಹೀಗೆ ಹೇಳಿದ್ದಾರೆ:—

"ಇನ್ನೊಂದು ಮಾತು ನನ್ನಿಂದ ಬರಬೇಕಾಗಿದೆ. ಅದನ್ನು ತಾವೂ ನಿರೀಕ್ಷಿಸುತ್ತಿದ್ದೀರಿ. ನಾನೂ ಆ ಮಾತು ಆಡಲು ಆತುರನಾಗಿದ್ದೇನೆ. ಅದು ಕನ್ನಡ ಮಾಧ್ಯಮದ ವಿಷಯ. ಅರಸರಿಂದ ಹಿಡಿದು ಆಳುಗಳವರೆಗೂ ಎಲ್ಲರೂ ಕನ್ನಡ ಮಾತಾಡುವ ಈ ದೇಶದಲ್ಲಿ ಕನ್ನಡವು ದ್ವಿತೀಯ ಭಾಷೆಯಾಗಿರುವುದು ತಪ್ಪಿ ಐದಾರು ವರ್ಷವಾದರೂ ಆಗಬೇಕಾಗಿತ್ತು. ಕನ್ನಡ ದೇವಿಯು, ಶಾಲೆಗಳಲ್ಲಿ ಕನ್ನಡವು ಪ್ರಥಮ ಭಾಷೆಯಾಗುವಂತೆ ಮಾಡಿದ ಕೀರ್ತಿಯನ್ನು ನನಗೆ ಕೊಡಬೇಕು ಎಂದೋ, ಏನೋ, ಇದುವರೆಗೂ ಆಗಬೇಕಾಗಿದ್ದ, ಅತ್ಯವಶ್ಯಕವಾದ ಬದಲಾವಣೆಯನ್ನು ತಡೆದಿಟ್ಟದ್ದಳೆಂದು ತೋರುತ್ತದೆ. ಏನೇ ಆಗಲಿ, ಹೈಸ್ಕೂಲ್ ಕೊನೆಯವರೆಗೆ ಕನ್ನಡ ಪ್ರಥಮ ಭಾಷೆಯಾಗುವ ಕಾಲ ಬಂದಿದೆ. ಮಾಡಿಬಿಡೋಣ. ಆ ಕಾರ್ಯ ಮಾಡಿ ನಾವು ನಮ್ಮ ಮಾತೃಭಕ್ತಿಯನ್ನು ಮೆರೆಯೋಣ. ಹಿಂದೆ ವಿದ್ಯಾ ಇಲಾಖೆಯ ಅಧಿಕಾರ ಸೂತ್ರಗಳನ್ನು ವಹಿಸಿದ್ದ ದಿವಂಗತರಾದ, ನನ್ನ ವಿದ್ಯಾ ಗುರುಗಳಾಗಿದ್ದ ಶ್ರೀಮಾನ್ ಎನ್. ಎಸ್. ಸುಬ್ಬರಾಯರವರು ಪ್ರಾರಂಭಗೊಳಿಸಿದ ಮಹತ್ಕಾರ್ಯವನ್ನು ಸಾಂಗಗೊಳಿಸುವ ಅವಕಾಶ ದೊರೆತುದಕ್ಕಾಗಿ ನಾನು ಹರ್ಷಿಸುತ್ತೇನೆ. ಹಾಗೆಯೇ ಈಗ ದೇಶಾದ್ಯಂತವೂ ಹೈಸ್ಕೂಲ್ ತೀರುವವರೆಗೆ ಕನ್ನಡವೇ ಶಿಕ್ಷಣ ಮಾಧ್ಯಮವಾಗಬೇಕೆಂಬ ಕನ್ನಡಿಗರ ಹಟ ಗೆಲ್ಲಬೇಕು. ಭಾರತದ ರಾಜಭಾಷೆಯಾದರೂ ಹಿಂದಿ ಕನ್ನಡದ ತಂಗಿಯಾಗಿ ಮೆರೆಯಲಿ. ಸೈನ್ಸ್, ಮ್ಯಾಥಮ್ಯಾಟಿಕ್ಸ್, ಮೊದಲಾದ ವಿಜ್ಞಾನ ಪಾಠಗಳು ಆಯಾ ಟೆಕ್ನಿಕಲ್ ಶಬ್ದಗಳನ್ನು ಹಾಗೆ ಹಾಗೆಯೇ ಇಟ್ಟುಕೊಂಡು ಕನ್ನಡ ಮಾಧ್ಯಮವನ್ನು ಇಟ್ಟುಕೊಂಡು ಮುಂದುವರಿಯಲಿ. ಅಂತೂ ಕನ್ನಡ ಮಾಧ್ಯಮ ಹೈಸ್ಕೂಲಿನಲ್ಲಿ ಬಳಕೆಗೆ ಬರುವುದು ಮಾತ್ರವೇ ಅಲ್ಲ; ದೇಶವು ಇನ್ನು ಯಾವ ಮಾಧ್ಯಮವನ್ನೂ ಸಹಿಸಬಾರದು. ಆ ಅಸಹನೆ ಪರಭಾಷಾ ದ್ವೇಷದಿಂದಲ್ಲ; ಸ್ವಭಾಷಾ ಮೋಹದಿಂದಲ್ಲ; ಆಗಬೇಕಾದ ಕಾರ್ಯವನ್ನು ಆಗ ಮಾಡಬೇಕು ಎಂಬ ಕರ್ತವ್ಯ ಪರಾಯಣತೆಯ ದೃಷ್ಟಿಯಿಂದ."

ಆದ್ದರಿಂದ ಸರ್ಕಾರದವರು ಕನ್ನಡಕ್ಕೆ ಮಾಡಬೇಕಾಗಿದ್ದ ತಮ್ಮ ಕೆಲಸವನ್ನು ಈಗ ಮಾಡಲು ದೃಢ ಸಂಕಲ್ಪ ತೋರುತ್ತಿರುವುದು ನಮಗೆ ಸಂತೋಷವನ್ನುಂಟುಮಾಡಿದೆ. ಈ ಹೆಜ್ಜೆಯ ಜತೆಗೆ ವಿಶ್ವವಿದ್ಯಾನಿಲಯದಲ್ಲಿ ಇಂಟರ್‌ಮೀಡಿಯೇಟ್ ಪೂರ್ತಿ ಕನ್ನಡವನ್ನು ಬೋಧಕಭಾಷೆಯನ್ನಾಗಿ ಮಾಡುವ ಎರಡನೆಯ ಹೆಜ್ಜೆಯನ್ನು ಈ ಕೂಡಲೆ ದೃಢಸಂಕಲ್ಪದಿಂದಿಡಲಿ. ಮೂರನೆಯ ಹೆಜ್ಜೆಯಿಡುವುದಕ್ಕೆ ಎರಡು ವರ್ಷ ತಡೆದರೂ ಚಿಂತೆಯಿಲ್ಲ.

## ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾನಿಲಯ ಮತ್ತು ಕೇಂದ್ರ ಸರ್ಕಾರ

ಹೈದರಾಬಾದಿನಲ್ಲಿರುವ ಉಸ್ಮಾನಿಯಾ ವಿಶ್ವವಿದ್ಯಾನಿಲಯವನ್ನು ಕೇಂದ್ರ ಸರ್ಕಾರಕ್ಕೆ ವಹಿಸಿಬಿಡಬೇಕೆಂದು ಕೇಳಿರುವುದಾಗಿಯೂ ಅದನ್ನು ಹಿಂದಿ ಬೋಧಕ ಭಾಷೆಯ ವಿಶ್ವವಿದ್ಯಾನಿಲಯವನ್ನಾಗಿ ಪರಿವರ್ತಿಸುವುದಾಗಿಯೂ, ಹಾಗೆ ಪರಿವರ್ತಿಸುವುದರಿಂದ ದಕ್ಷಿಣ ಭಾರತಕ್ಕೆ ದೊಡ್ಡ ಉಪಕಾರವಾಗುವುದಾಗಿಯೂ ಸುದ್ದಿಗಳು ಹೊರಬಿದ್ದುದು ಸರಿಯಷ್ಟೆ. ಇಪ್ಪತ್ತುಮೂರು ಸದಸ್ಯರನ್ನುಳ್ಳ 'Osmania University Affairs Citizens' Committee' ಎಂಬ ಸಮಿತಿ ಭರತಖಂಡದ ಪ್ರಧಾನ ಸಚಿವರಾದ ಮಾನ್ಯ ಜವಾಹರಲಾಲ್ ನೆಹರೂ ಅವರಿಗೂ ಪಾರ್ಲಿಮೆಂಟಿನ ಸದಸ್ಯರಿಗೂ ಜೂನ್ ೩೦ನೆಯ ತಾರೀಕಿನಲ್ಲಿ ಒಂದು ವಿನಂತಿಯನ್ನು ಕಳಿಸಿಕೊಟ್ಟು ಕೇಂದ್ರ ಸರ್ಕಾರ ಆ ವಿಶ್ವವಿದ್ಯಾನಿಲಯವನ್ನು ವಹಿಸಿಕೊಳ್ಳುವ ಪ್ರಶ್ನೆಯನ್ನು ಬಿಟ್ಟುಬಿಡಬೇಕೆಂದು ಒತ್ತಾಯಪಡಿಸಿದೆ. ಆ ವಿನಂತಿಯಲ್ಲಿ ('Hindu' July 2) ಸಮಿತಿ ಈ ರೀತಿ ಹೇಳಿದ್ದಾರೆಂದು ತಿಳಿಯುತ್ತದೆ:—

"ಹೈದರಾಬಾದ್ ಸಂಸ್ಥಾನದ ಜನ ಹಿಂದಿ ಕಡ್ಡಾಯವಾದ ಭಾಷೆಯಾಗಿರಬೇಕೆಂದು ಒಪ್ಪಿಕೊಂಡಿದ್ದಾರೆ; ಆದರೆ ಹಿಂದಿಯೊಂದೇ ಏಕೆ ವಿಶ್ವವಿದ್ಯಾನಿಲಯದ ದರ್ಜೆಯಲ್ಲಿ ಬೋಧಕಭಾಷೆಯಾಗಿರಬೇಕೆಂಬುದು ಅವರಿಗೆ ಮನದಟ್ಟಾಗಿಲ್ಲ; ಮತ್ತು ಎಲ್ಲ ಸಂಸ್ಥಾನಗಳಲ್ಲೂ ಹಿಂದಿಯೊಂದೇ ಆಡಳಿತದ ಭಾಷೆಯಾಗಿ ಏಕಿರಬೇಕೆಂಬುದೂ ಅವರಿಗೆ ಮನದಟ್ಟಾಗಿಲ್ಲ. ಉತ್ತರಭಾರತಕ್ಕೂ ದಕ್ಷಿಣ ಭಾರತಕ್ಕೂ ಸಾಂಸ್ಕೃತಿಕ ಸಂಬಂಧ ಬೆಳಸಲು ಹಿಂದಿ

ಸಹಕಾರಿ ಎಂಬ ಕಾರಣವನ್ನು ಒಪ್ಪಲಾಗುವುದಿಲ್ಲ. ಹಿಂದಿ ಪ್ರಚಾರದಲ್ಲಿಲ್ಲದ ಇತರ ಪ್ರಾಂತಗಳಲ್ಲಿ ಹಿಂದಿಯನ್ನು ಬಲಾತ್ಕಾರವಾಗಿ ಹೊರಿಸುವುದರಿಂದ ಈ ಸಾಂಸ್ಕೃತಿಕ ಸಂಬಂಧ ಕೈಗೂಡುವುದಿಲ್ಲ. ಹಿಂದಿ ಭಾಷೆಯನ್ನು ಮಾತ್ರ ಅಭಿವೃದ್ಧಿಪಡಿಸುವುದು, ಆ ಭಾಷೆಗೆ ಮಾತ್ರ ಪ್ರೋತ್ಸಾಹ ಕೊಡುವುದು—ಇವುಗಳಲ್ಲೇ ಕೇಂದ್ರ ಸರ್ಕಾರದ ಜವಾಬ್ದಾರಿ ಮುಗಿಯುವುದಿಲ್ಲ. ಭರತಖಂಡದಲ್ಲಿ ನಿಜವಾದ ಪ್ರಜಾರಾಜ್ಯ ಕಾರ್ಯರೂಪಕ್ಕೆ ಬರುವಂತೆ ಇತರ ಪ್ರಧಾನ ಭಾಷೆಗಳನ್ನೂ ಅಭಿವೃದ್ಧಿಗೆ ತರುವ ಜವಾಬ್ದಾರಿ ಕೇಂದ್ರ ಸರ್ಕಾರಕ್ಕೆ ಸೇರಿದ್ದು".

"ಉಸ್ಮಾನಿಯಾ ವಿಶ್ವವಿದ್ಯಾನಿಲಯವನ್ನು ಕೇಂದ್ರಕ್ಕೆ ವಹಿಸಿಕೊಡುವ ವಿಚಾರದಲ್ಲಾಗಲಿ, ಹಿಂದಿಯನ್ನು ಆ ವಿಶ್ವವಿದ್ಯಾನಿಲಯದಲ್ಲಿ ಏಕೈಕ ಬೋಧಕ ಭಾಷೆಯನ್ನಾಗಿ ಮಾಡುವ ವಿಚಾರದಲ್ಲಾಗಲಿ ಈಗಿನ ಪ್ರಜಾಬೆಂಬಲವುಳ್ಳ ಮಂತ್ರಿ ಸಂಪುಟವನ್ನಾಗಲಿ, ವಿಶ್ವವಿದ್ಯಾನಿಲಯದ ಕೌನ್ಸಿಲ್ ಅಥವಾ ಸೆನೆಟ್ ಸಭೆಗಳನ್ನಾಗಲಿ ಆಲೋಚನೆ ಕೇಳಿಯೇ ಇಲ್ಲ. ದಕ್ಷಿಣ ಭಾರತದಲ್ಲಿ ಹಿಂದಿ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಬೇಕೆಂಬ ಇಷ್ಟ ಕೇಂದ್ರ ಸರ್ಕಾರಕ್ಕಿದ್ದರೆ ದಕ್ಷಿಣ ಭಾರತದ ಎಲ್ಲ ಪ್ರಾಂತಗಳಿಂದಲೂ ದ್ರವ್ಯಸಹಾಯ ಪಡೆದು ಮದ್ರಾಸ್ ಪಟ್ಟಣದಲ್ಲಿ ಅದನ್ನು ಸ್ಥಾಪಿಸಲಿ. ವಿಶ್ವವಿದ್ಯಾನಿಲಯದಲ್ಲಿ ಹಿಂದಿ ಬೋಧಕಭಾಷೆಯಾಗಿರಲು ಅರ್ಹತೆ ಪಡೆದಿದೆಯೆ? ಎಂದು ನಾವು ಪ್ರಶ್ನಿಸುತ್ತೇವೆ. 'The University Education Commission' ಅವರು ಹಿಂದಿಯೂ ಸೇರಿ ಭರತಖಂಡದ ಯಾವ ಆಧುನಿಕ ಭಾಷೆಯೂ ವಿಶ್ವವಿದ್ಯಾನಿಲಯದ ದರ್ಜೆಯಲ್ಲಿ ಬೋಧಕಭಾಷೆಯಾಗುವಷ್ಟು ಬೆಳೆದಿಲ್ಲ ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಎಲ್ಲ ಪ್ರಾಂತ ಭಾಷೆಗಳನ್ನೂ ಅಭಿವೃದ್ಧಿಗೆ ತರುವ ಬಗ್ಗೆ ಕೇಂದ್ರ ಸರ್ಕಾರ ಪ್ರಾಂತ ಸರ್ಕಾರಗಳೊಡನೆ ಸಮಾಲೋಚಿಸಿ ಒಂದು ಸಾಮಾನ್ಯ ಕಾರ್ಯನೀತಿಯನ್ನೂ, ಕಾರ್ಯಕ್ರಮವನ್ನೂ ಹಾಕಿಕೊಂಡು ಸಹಾಯ ಮಾಡಬೇಕಲ್ಲದೆ ಹಿಂದಿ ಭಾಷೆಯೊಂದನ್ನೇ ವಹಿಸಿಕೊಂಡು ಉಳಿದ ಭಾಷೆಗಳ ಬಗ್ಗೆ ಮಲತಾಯಿಯಂತೆ ವರ್ತಿಸುವುದು ಸರಿಯಲ್ಲ."

ಈ ಹಿಂದಿ ಭಾಷೆಯ ಪ್ರಶ್ನೆ ಕೇವಲ ಭಾಷೆಯ ಪ್ರಶ್ನೆಯೊಂದೇ ಅಲ್ಲ. ಅದು ರಾಜಕೀಯಕ್ಕೂ ಸಂಬಂಧಿಸಿದೆ. ಬೊಂಬಾಯಿನಂಥ ಪ್ರಾಂತದಲ್ಲಿ ಕನ್ನಡ, ಮಹಾರಾಷ್ಟ್ರ, ಮತ್ತು ಗುಜರಾತಿ—ಹೀಗೆ ಮೂರು ಪ್ರಧಾನ ಭಾಷೆಗಳಿವೆ. ಆಡಳಿತದ ಭಾಷೆಯಾಗಿಯೂ ವಿಶ್ವವಿದ್ಯಾನಿಲಯದಲ್ಲಿ ಬೋಧಕಭಾಷೆಯಾಗಿಯೂ ಮೇಲಿನ ಭಾಷೆಗಳಲ್ಲಿ ಯಾವೊಂದನ್ನಾದರೂ ಇಟ್ಟುಕೊಂಡರೆ ಉಳಿದ ಭಾಷೆಯವರು ಪ್ರತಿಭಟಿಸುತ್ತಾರೆ. ಆದ್ದರಿಂದ ಇಬ್ಬರ ಜಗಳ ಮೂರನೆಯವನಿಗೆ ಲಾಭ ಎಂಬಂತೆ ಹಿಂದಿ ಆಡಳಿತದ ಭಾಷೆಯಾಗಿರಬೇಕೆಂದೂ, ಮುಂದೆ ವಿಶ್ವವಿದ್ಯಾನಿಲಯಗಳಲ್ಲಿ ಹಿಂದಿ ಬೋಧಕಭಾಷೆಯಾಗಿರಬೇಕೆಂದೂ ಬೊಂಬಾಯಿ ಸರ್ಕಾರ ಆಜ್ಞೆ ಹೊರಡಿಸಿತು. ಹೀಗೆಯೇ ಬಹುಭಾಷಾ ಪ್ರಾಂತಗಳೆಂಬ ಕಾರಣದಿಂದ ಹೈದರಾಬಾದಿನಲ್ಲೂ ಉಳಿದ ಪ್ರಾಂತಗಳಲ್ಲೂ ಹಿಂದಿಗೆ ಸಾರ್ವಭೌಮ ಪಟ್ಟ ಕಟ್ಟುವ ಯೋಚನೆ ಹಲವರಲ್ಲಿದೆ ಎಂಬುದು ಮೇಲಿನ ಸಮಿತಿಯವರ ವರದಿಯಿಂದ ತಿಳಿಯುತ್ತದೆಯಲ್ಲವೆ? ಭಾಷಾವಾರು ಪ್ರಾಂತಗಳು ಏರ್ಪಟ್ಟರೆ ಹಿಂದಿಯ ಸಾರ್ವಭೌಮ ಪಟ್ಟಕ್ಕೆ ಚ್ಯುತಿ ಬಂದೇಬರುತ್ತದೆ ಎಂಬ ಶಂಕೆಯೂ ಆ ಹಲವರಿಗಿದೆಯೆಂದು ತೋರುತ್ತದೆ.

---

Reg. No. M. 3975

Licenced to Post without Prepayment. License No.6

# ಕನ್ನಡ ಸಾಹಿತ ಪರಿಷತ್ತು



## ಪರಿಷತ್ತಿನ ಪ್ರಕಟನೆಗಳು

| | | | | |
|---|---|---|---|---|
| ೧. | ಕನ್ನಡ ಬಾವುಟ (ಮೂರನೆಯ ಮುದ್ರಣ) .... | ೨ | ೦ | ೦ |
| ೨. | ಪಂಪ ಭಾರತದ ಕಥೆ (ವಚನ) .... | ೧ | ೪ | ೦ |
| ೩. | ಪಂಪ ಭಾರತದ ನಿಘಂಟು .... .... | ೧ | ೦ | ೦ |
| ೪. | ಪಂಪ ರಾಮಾಯಣದ ಕಥೆ (ವಚನ) .... | ೦ | ೧೨ | ೦ |
| ೫. | *ಪಂಪ ರಾಮಾಯಣ (೪ನೆಯ ಆಶ್ವಾಸ) .... | ೦ | ೮ | ೦ |
| ೬. | ಪಂಪ ರಾಮಾಯಣದ ನಿಘಂಟು .... .... | ೦ | ೮ | ೦ |
| ೭. | *ತೊರವೆಯ ರಾಮಾಯಣ (ಬಾಲಕಾಂಡ ಸಂಧಿ ೧೩-೧೬) .... | ೦ | ೩ | ೯ |
| ೮. | ಸೀತಾಪರಿತ್ಯಾಗ (ಜೈಮಿನಿ ಭಾರತದಿಂದ) .... | ೦ | ೧೨ | ೬ |
| ೯. | ಜೇಮ್ಸ್ ಏಬ್ರಾಮ್ ಗಾರ್ಫೀಲ್ಡನ ಚರಿತ್ರೆ: ಕ್ಯಾಲಿಕೊ ಪ್ರತಿ | ೧ | ೮ | ೦ |
| | ಸಾದಾ ಪ್ರತಿ | ೧ | ೦ | ೦ |
| ೧೦. | ಜ್ಯೋತಿರ್ವಿನೋದಿನಿ .... .... | ೨ | ೦ | ೦ |
| ೧೧. | ಹರಿದಾಸರ ಕೃತಿಗಳು (ಸ್ವರಪ್ರಸ್ತಾರ ಸಹಿತ) .... | ೦ | ೧೫ | ೦ |
| ೧೨. | ಹೂಮಾಲೆ .... .... | ೦ | ೧೦ | ೦ |
| ೧೩. | ಕನ್ನಡ ನಾಡಿನ ಚರಿತ್ರೆ: ಭಾಗ ೧ (೨ನೆಯ ಮುದ್ರಣ) .... | ೧ | ೮ | ೦ |
| | ಭಾಗ ೨ .... .... | ೧ | ೧೪ | ೦ |
| | ಭಾಗ ೩ .... .... | ೧ | ೦ | ೦ |
| ೧೪. | ವಡ್ಡಾರಾಧನೆ .... .... .... | ೨ | ೮ | ೦ |
| ೧೫. | ಜೈಮಿನಿ ಭಾರತದ ಕನ್ನಡ ಗದ್ಯಾನುವಾದ (ಅಶ್ವಮೇಧಿಕ ಪರ್ವ) | ೨ | ೪ | ೦ |
| ೧೬. | ಹರಿಶ್ಚಂದ್ರನ ರಾಜ್ಯಸಮರ್ಪಣ .... .... | ೦ | ೪ | ೦ |
| ೧೭. | ಸರ್ವೋದಯ .... .... .... | ೦ | ೫ | ೦ |
| ೧೮. | ಸೋಮೇಶ್ವರ ಶತಕ .... .... .... | ೧ | ೪ | ೦ |
| ೧೯. | ಸಂಕಲನ .... .... .... | ೦ | ೧೦ | ೦ |
| ೨೦. | ಕುಮಾರವ್ಯಾಸದರ್ಶನ .... .... .... | ೦ | ೨ | ೦ |
| ೨೧. | ಕನ್ನಡದಲ್ಲಿ ಸುಧಾರಣೆಗಳು .... .... | ೦ | ೬ | ೦ |
| ೨೨. | ಅರುಂಧತಿ .... .... .... | ೦ | ೪ | ೦ |
| ೨೩. | ಚಂದ್ರಹಾಸೋಪಾಖ್ಯಾನ .... .... | ೦ | ೧೨ | ೦ |
| ೨೪ | ದೂತವಾಕ್ಯ .... .... .... | ೦ | ೪ | ೦ |
| ೨೫ | ಶಿವಶರಣರ ಕೃತಿಗಳು .... .... .... | ೨ | ೦ | ೦ |
| ೨೬. | ಹರಿದಾಸ ಸಾಹಿತ್ಯ- ಇಂಗ್ಲಿಷ್ ಉಪೋದ್ಘಾತದೊಡನೆ .... | ೧೦ | ೦ | ೦ |
| ,, | ಇಂಗ್ಲಿಷ್ ಉಪೋದ್ಘಾತವಿಲ್ಲದ ಪ್ರತಿ.... | ೮ | ೦ | ೦ |

* ಪ್ರತಿಗಳು ಮುಗಿದಿವೆ.

ಪುಸ್ತಕಗಳನ್ನು ಕೊಳ್ಳುವವರಿಗೆ ಕೆಳಗೆ ಕಂಡಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು.

ರೂ. ೧೫/ ಮತ್ತು ಮೇಲ್ಪಟ್ಟು ಬೆಲೆಯ ಪುಸ್ತಕಗಳನ್ನು ಕೊಳ್ಳುವವರಿಗೆ ಸೇ. ೧೦ ರಂತೆ,
ರೂ. ೫೦/ ಮತ್ತು ಮೇಲ್ಪಟ್ಟು ಕೊಳ್ಳುವವರಿಗೆ ಸೇ. ೧೫ ರಂತೆ,
ರೂ. ೧೦೦/ ಮತ್ತು ಮೇಲ್ಪಟ್ಟು ಕೊಳ್ಳುವವರಿಗೆ ಸೇ. ೨೦ ರಂತೆ.

ಶ್ರೀಕಂಠಯ್ಯ ಅಚ್ಚುಕೂಟ-ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೨. ೧,೧೦೦